

# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿ ತ್ರೈಮಾಸಿಕ

## ದಯವಿಟ್ಟು ಗಮನಿಸಿ

ಪ್ರತಿ ಪುಸ್ತಕಕ್ಕೂ ಮುಖ ಬೆಲೆಯ ಶೇ. ೨೦ರಷ್ಟು ರಿಯಾಯಿತಿ ನೀಡಲಾಗುವುದು.



ಶೇ. ೩೩ರಷ್ಟು ರಿಯಾಯಿತಿಯಿದೆ. ಒಂದು ಸಾವಿರ ರೂಪಾಯಿಗಳಿಗೆ ಮೇಲ್ಪಟ್ಟು ಪುಸ್ತಕಗಳನ್ನು ಖರೀದಿಸಬೇಕು.



ಕರ್ನಾಟಕ ಸಾಹಿತ್ಯ ಅಕಾಡೆಮಿಯು ಕನ್ನಡ ಹಾಗೂ ಇಂಗ್ಲೀಷ್ ಭಾಷೆಗಳಲ್ಲಿ ಪ್ರಕಟಿಸುತ್ತಿರುವ ತ್ರೈಮಾಸಿಕ ಪತ್ರಿಕೆ 'ಅನಿಕೇತನ'ಕ್ಕೆ ಚಂದಾದಾರರಾಗಿರಿ.

| | | |
|---|---|---|
| ಬಿಡಿ ಪ್ರತಿ | - | ೨೦-೦೦ |
| ವಾರ್ಷಿಕ ಚಂದಾ | - | ೭೦-೦೦ |
| ಆಜೀವ ಚಂದಾ | - | ೨೫೦-೦೦ |

## ಕರ್ನಾಟಕ ಸಾಹಿತ್ಯ ಅಕಾಡೆಮಿಯ ಹೊಸ ಪ್ರಕಟಣೆಗಳು

### ಕವಿ-ಕೃತಿ ಆಧುನಿಕ ಚಿಂತನ ಮಾಲೆ

| | | | |
|---|---|---|---|
| ೧. | ಬೇಂದ್ರೆ ಕಾವ್ಯ | ಜಿ.ಎಸ್. ಆಮೂರ | ೧೫೦.೦೦ |
| ೨. | ಕುವೆಂಪು ಕಾದಂಬರಿಗಳು | ಗುರುಪಾದ ಮರಿಗುದ್ದಿ | ೧೫೦.೦೦ |
| ೩. | ಬಸವ ಸಾಹಿತ್ಯ | ಮೃತ್ಯುಂಜಯ ರುಮಾಲೆ | ೧೨೫.೦೦ |
| ೪. | ಕುಮಾರವ್ಯಾಸನ ಕನ್ನಡ ಭಾರತ | ಶ್ಯಾಮಸುಂದರ ಬಿದರಕುಂದಿ | ೧೨೫.೦೦ |
| ೫. | ಅಲ್ಲಮಪ್ರಭು - ಚಿಂತನ | ಡಾ. ಎಸ್.ಕೆ. ಕೊಪ್ಪಾ | ೧೨೫.೦೦ |
| ೬. | ಪುರಂದರದಾಸ-ಕೀರ್ತನ | ಮಧುಕರ ಯಕ್ಕುಂಡಿ | ೬೫.೦೦ |
| | | ಒಟ್ಟು | ೭೪೦.೦೦ |

ಎಂದಿನಂತೆಯೇ ಶೇ. ೨೦ರ ರಿಯಾಯಿತಿ ಉಂಟು.

# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿಯ ತ್ರೈಮಾಸಿಕ

ಜುಲೈ - ಸೆಪ್ಟೆಂಬರ್, ೨೦೦೪

*ಸಂಪಾದಕರು*

ಪ್ರೊ. ವಿ. ಚಂದ್ರಶೇಖರ ನಂಗಲಿ

ಲಕ್ಷ್ಮೀಪತಿ ಕೋಲಾರ



ಕರ್ನಾಟಕ ಸಾಹಿತ್ಯ ಅಕಾಡೆಮಿ

ಬೆಂಗಳೂರು

ANIKETHANA : A Literary Journal (Quarterly)
Edited by : **Prof. V. Chandrashekhara Nangali**
**Lakshmipathi Kolara**
Published by : Registrar, Karnataka Sahithya Academy
Kannada Bhavan, J.C. Road, Bangalore - 2

Pages : viii + 118

Registration No. 45646/88

ಸಂಪುಟ : ೧೬

ಸಂಚಿಕೆ : ೧

ಪ್ರತಿಗಳು : ೧೨೦೦

*ಪ್ರಕಾಶಕರು*

**ವಿ.ಎನ್. ಮಲ್ಲಿಕಾರ್ಜುನಸ್ವಾಮಿ**
ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ. ಸಿ. ರಸ್ತೆ
ಬೆಂಗಳೂರು - ೫೬೦ ೦೦೨

ಬಿಡಿ ಪ್ರತಿ : ರೂ. ೨೦/-
ವಾರ್ಷಿಕ ಚಂದಾ : ರೂ. ೭೦/-
ಆಜೀವ ಚಂದಾ : ರೂ. ೨೫೦/-

ಮುಖಪುಟ ಕಲೆ : ಜೆ.ಎಂ.ಎಸ್. ಮಣಿ

ಸೌಜನ್ಯ : ಕರ್ನಾಟಕ ಲಲಿತ ಕಲಾ ಅಕಾಡೆಮಿ

ರಕ್ಷಾಪುಟ ವಿನ್ಯಾಸ : ಎಸ್. ಮಂಜುನಾಥ್

ಲಕ್ಷ್ಮಿ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨

## ಕ್ಷಮೆ ಕೇಳುತ್ತಾ...

ನಮ್ಮ ಅವಧಿಯ ಸಂಚಿಕೆಗಳನ್ನು ಪೂರೈಸಿದ ನಂತರ ಹೊಸ ಸಂಪಾದಕ ಬಳಗದ ನಿರೀಕ್ಷೆಯಲ್ಲಿಯೇ ನಾವೂ ಇದ್ದೆವು. ಅನಿವಾರ್ಯ ಕಾರಣಗಳಿಂದಾಗಿ ನೂತನ ಸಮಿತಿಯ ರಚನೆ ಮತ್ತು ಆ ಮೂಲಕ ಸಂಪಾದಕೀಯ ಬಳಗದ ನೇಮಕವೂ ಮುಂದೂಡುತ್ತಲೇ ಹೋದದ್ದರಿಂದ 'ಅನಿಕೇತನ'ದ ಜೂನ್-೨೦೦೦ರ ನಂತರದ ಸಂಚಿಕೆಗಳು ಓದುಗರ ಕೈ ಸೇರಲಿಲ್ಲ. ಹೀಗೆ ತಾಂತ್ರಿಕ ಕಾರಣಗಳಿಂದಾಗಿ 'ಅನಿಕೇತನ' ತ್ರೈಮಾಸಿಕದ ಪ್ರಕಟಣೆ ತಾತ್ಕಾಲಿಕ ನಿಲುಗಡೆಯಲ್ಲಿತ್ತು. ಅದಕ್ಕಾಗಿ ನಾವು ಎಲ್ಲರ ಕ್ಷಮೆ ಕೇಳುತ್ತೇವೆ. ಹೀಗಾಗದಂತೆ ವಹಿಸಬೇಕಾದ ಎಚ್ಚರಿಕೆಗಳ ಬಗ್ಗೆಯೂ ಈಗ ಗಮನ ಕೊಡಲಾಗುತ್ತಿದೆ. ಪ್ರಾಯಶಃ ಇಲ್ಲಿಂದಾಚೆಗೆ 'ಅನಿವಾರ್ಯ ಕಾರಣ'ಗಳ ನಡುವೆಯೂ 'ಅನಿಕೇತನ' ಪತ್ರಿಕೆ ಮಾತ್ರ ನಿಯಮಿತವಾಗಿಯೇ ಹೊರಬರುತ್ತದೆಂದಷ್ಟೇ ಈ ಸಧ್ಯ ನಾವು ಆಶಿಸಬಹುದು. ಅದರಂಗವಾಗಿಯೇ ಹಿಂದಿನ ಸಮಿತಿಯ ಸಂಪಾದಕದ್ವಯರಾಗಿ ಕಾರ್ಯನಿರ್ವಹಿಸಿದ್ದ ನಾವೇ ನೂತನ ಸಮಿತಿಯ ಗೈರು ಹಾಜರಿಯಲ್ಲಿ ಅಥವ ನೂತನ ಸಮಿತಿಯು ನೇಮಕವಾಗುವವರೆಗೂ 'ಅನಿಕೇತನ'ದ ಸಂಚಿಕೆಗಳನ್ನು ಹೊರತರಲು ನಿರ್ದೇಶಿಸಲ್ಪಟ್ಟಿದ್ದರಿಂದಲೇ ಈ ಸಂಚಿಕೆ ರೂಪುಗೊಂಡಿದೆ.

'ಕರಿಯರ ಕೈಗಳು' 'ಕಣ್ಣು' ಹಾಗೂ 'ಕಂಠ ಹಾರ'-ಕಥೆಗಳು ಅತ್ಯಂತ ಸೂಕ್ಷ್ಮ ಸಂವೇದನೆಯ ಕಥೆಗಳಾಗಿವೆ. ಎಲ್ಲ ಕಾಲಕ್ಕೂ ಸಲ್ಲುವಂತಹ ಶ್ರೇಷ್ಠ ರಚನೆಗಳಾಗಿವೆ. ಕಾಲ ಹಾಗೂ ದೇಶಗಳು ಬೇರೆಯಾದರೂ ಅಂತಿಮವಾಗಿ ಮನುಷ್ಯರ ಮೂಲಭೂತ ಸಂವೇದನೆಗಳು ಒಂದೇ ರೀತಿಯವೆಂಬುದನ್ನು ಈ ಕಥೆಗಳು ನಿರೂಪಿಸುತ್ತವೆ. ಮನ ಮುಟ್ಟುವ ಈ ಕಥೆಗಳು 'ಅನಿಕೇತನ'ದ ಓದುಗರಿಗೆ ಇಷ್ಟವಾಗುತ್ತವೆಂಬುದು ನಮ್ಮ ವಿಶ್ವಾಸ. ಅದರಲ್ಲೂ ಒಂದು ಮಾಮೂಲಿ ಪ್ರಸಂಗದ ನಿರೂಪಣೆಯಂತಿರುವ 'ಕರಿಯರ ಕೈಗಳು' ಕಥೆ ನಮ್ಮ ನಾಡಿನ ದಲಿತ ಬಂಧುಗಳ ನೋವು, ಅಪಮಾನ ಹಾಗೂ ಶ್ರಮ ಸಂಸ್ಕೃತಿಯ ಆತ್ಮಗೌರವವನ್ನೆ ನೆನಪಿಸುವಂತಿದೆ.

ವೈಜ್ಞಾನಿಕತೆ-ಸೃಜನಶೀಲತೆ ಹಾಗೂ ತಾತ್ವಿಕ ನೆಲೆಯ ದಾರ್ಶನಿಕತೆಗಳನ್ನು ಮಥಿಸಿ, ಹೊಸ ಕಾಣ್ಕೆಯ ಸೌಂದರ್ಯಾನುಭೂತಿಯನ್ನು ಮನಗಾಣಿಸುವ ಪ್ರಯತ್ನದಂತಿರುವ

ಕೆ.ಟಿ. ಗಟ್ಟಿಯವರ 'ಚುಕ್ಕಿ ಚಿತ್ರನಾದ' ಲೇಖನವು ಕೂಡ ಓದುಗರನ್ನು ಆಳ ಆಲೋಚನೆಗಳಿಗೆ ಹಚ್ಚಬಲ್ಲಷ್ಟು ಸಮರ್ಥವೂ, ವಿಶಿಷ್ಟ ರೀತಿಯದೂ ಆಗಿದೆ. ಸುಗತ ಅವರ ಸಾಂದರ್ಭಿಕವೆನಿಸುವಂತಹ 'ಲೋಕ ತಾಯ್ನುಡಿ'ಯ ದಿನದ ಹಿನ್ನೆಲೆಯಲ್ಲಿನ ಲೇಖನ ಜಗತ್ತಿನ ಬಹುಭಾಷಿಕತೆಯ ಸನ್ನಿವೇಶದಲ್ಲಿನ ಬಹುಮುಖಿ ಸಂಸ್ಕೃತಿಯ ಪರವಾದ ನಿಲುವು ಎಂದರೇನೆಂಬುದನ್ನು ವಿವರಿಸುತ್ತ ಯಜಮಾನ ಭಾಷೆಗಳ ಅನ್ಯಾಕ್ರಮಣಶೀಲತೆಯಿಂದಾಗಿ ಸ್ಥಳೀಯ ಭಾಷೆಗಳು ಎದುರಿಸುತ್ತಿರುವ ಅತ್ಯಂತ ಜಟಿಲ ಹಾಗೂ ಸೂಕ್ಷ್ಮ ಸಂಗತಿಗಳನ್ನು ಸಮರ್ಥವಾಗಿ ವಿಶ್ಲೇಷಿಸಿದ್ದಾರೆ.

ಹೊಸ ಸಹಸ್ರಮಾನ ಕಂಡ ಕನ್ನಡದ ಶ್ರೇಷ್ಠ ಕವಯತ್ರಿಯರಲ್ಲಿ ಶ್ರೀಮತಿ ಲಲಿತಾ ಸಿದ್ದಬಸವಯ್ಯನವರು ವಿಶೇಷ ಗಮನ ಸೆಳೆದವರು. ಅವರ 'ಇಹದ ಸ್ವರ' ಅಕಾಡೆಮಿ ಬಹುಮಾನವನ್ನು ಪಡೆದ ಕೃತಿ. ಇತ್ತೀಚೆಗೆ ಅವರ ನಾಲ್ಕನೆಯ ಕೃತಿ 'ಕೆಬ್ಬೆ ನೆಲ' ಬಿಡುಗಡೆಯಾಯಿತು. ದೇಸೀ ಸತ್ವದ ಲಲಿತಾ ಸಿದ್ದಬಸವಯ್ಯನವರ ಕವಿತೆಗಳು ವಿಶ್ವಾತ್ಮಕ ನೆಲೆಯೊಂದಿಗೆ ನಡೆಸುವ ಸೃಜನಶೀಲ ಅನುಸಂಧಾನಗಳು ಕುತೂಹಲದ ಪ್ರಯೋಗಗಳಾಗಿ ಕಾಣುತ್ತವೆ. ಬಂಡಾಯದ ಹತಾಶೆಯ ಬೆಳವಣಿಗೆಯ ನಂತರದ ಶ್ರೇಷ್ಠ ಸಾಧನೆ ಹಾಗೂ ಬಂಡಾಯೋತ್ತರದ ಪಂಥಾತೀತ ಕಾವ್ಯ ಮಾದರಿಗೆ ಲಲಿತಾ ಸಿದ್ದಬಸವಯ್ಯನವರ ರಚನೆಗಳು ಉತ್ತರ ರೂಪದಲ್ಲಿವೆ. ಅವರ ಐದು ಕವಿತೆಗಳು 'ಅನಿಕೇತನ'ದ ಈ ಸಂಚಿಕೆಯ ವಿಶೇಷ ಮೆರುಗು.

ಉಳಿದಂತೆ ವಿವೇಕಾನಂದರ ಪರಿಸರಕ್ಕೆ ಸಂಬಂಧಿಸಿದ ತಲಸ್ಪರ್ಶಿ ಬರಹಗಳು ಹಾಗೂ ರಾಮಲಿಂಗಪ್ಪ ಟಿ. ಬೇಗೂರರ 'ಗದುಗಿನ ಭಾರತ ಕುರಿತ ಟಿಪ್ಪಣಿಗಳು' ಆಸಕ್ತಿಯ ಓದುಗರಿಗೆ ಇಷ್ಟವಾಗಬಲ್ಲ ಶೈಲಿಯವು.

ಎಂದಿನಂತೆಯೇ ಓದುಗರು ಸಹೃದಯದಿಂದ ಸ್ಪಂದಿಸುವರೆಂಬ ನಂಬಿಕೆ ನಮ್ಮದು.

-ಸಂಪಾದಕರು.

## ಪರಿವಿಡಿ

ಭಾಗ - ೧

# ಕರಿಯರ ಕೈಗಳು

ಆಂಗ್ಲಮೂಲ : ಲೂಯಿ ಬರ್ನಾರ್ಡೋ ಹೋನ್‌ವಾನಾ
ಕನ್ನಡಕ್ಕೆ : ಡಾ. ಹರಿಚರಣ್ ಶೆಗ್ಗೊ

ನಾವು ಈ ವಿಷಯಕ್ಕೆ ಹೇಗೆ ತಲುಪಿದೆವೋ ನನಗೀಗ ನೆನಪಾಗುತ್ತಾ ಇಲ್ಲ. ಆದರೆ ಒಂದು ದಿನ ಟೀಚರ್ ಹೇಳಿದ್ದೇನೆಂದರೆ : ಕಪ್ಪು ಜನರ ಅಂಗೈಗಳು ದೇಹದ ಉಳಿದ ಭಾಗಗಳಿಗಿಂತ ಬಿಳಿಯಾಗಿರುತ್ತವಂತೆ. ಯಾಕೆಂದರೆ ಕೆಲವೇ ಶತಮಾನಗಳ ಹಿಂದೆ ಅವರು ಕಾಡುಮೃಗಗಳಂತೆ ನಾಲ್ಕನ್ನೂ ನೆಲದ ಮೇಲಿಟ್ಟು ನಡೆಯುತ್ತಿದ್ದರಂತೆ. ಇದರಿಂದ ಅಂಗೈಗಳು ಸೂರ್ಯನ ಬೆಳಕಿಗೆ ತೆರೆಯದೆ ಬಿಳಿಯಾಗಿಯೇ ಉಳಿದು ದೇಹ ಮಾತ್ರ ಕಪ್ಪು ಕಪ್ಪಾಗುತ್ತಾ ಹೋಯಿತಂತೆ. ಪ್ರಶ್ನೋತ್ತರಗಳು ಮುಗಿದ ನಂತರ ಫಾದರ್ ಕ್ರಿಸ್ಟಿಯಾನೋರವರು ಹೇಳಿದ್ದನ್ನು ನಾನು ಯೋಚಿಸಿದೆ. ಅವರು ಹೇಳಿದ್ದು : ನಾವು ಪೂರ್ತಿ ನಿಷ್ಪ್ರಯೋಜಕರಂತೆ. ಕಪ್ಪು ಜನರೇ ನಮಗಿಂತ ಎಷ್ಟೋ ವಾಸಿ ಮತ್ತು ಅವರು ಪುನಃ ಇದೇ ವಿಷಯಕ್ಕೆ ಹಿಂದಿರುಗಿ ಕರಿಯರ ಅಂಗೈ ಯಾಕೆ ಬಿಳಿ ಎಂದರೆ ಅವರು ಯಾವಾಗಲೂ ಅಂಗೈಗಳೆರಡನ್ನೂ ಜೋಡಿಸಿ, ರಹಸ್ಯವಾಗಿ ಪ್ರಾರ್ಥಿಸುತ್ತಿದ್ದರಂತೆ. ನನಗಿದು ತೀರಾ ಹಾಸ್ಯಾಸ್ಪದ ಎನ್ನಿಸಿತು. ನೀವೀಗ ನನ್ನನ್ನು ನೋಡಬೇಕು - ಅಂಗೈಗಳು ಮಾತ್ರ ಬಿಳಿಯಾಗಿರುವುದೇಕೆ ಎಂದು ನನಗೆ ಸರಿಯಾಗಿ ಉತ್ತರಿಸದೆ ನಾನ್ಯಾರನ್ನು ಹೋಗಗೊಡುವುದಿಲ್ಲ. ಅವರ್‍ಯಾರು ಬೇಕಾದರೂ ಇರಲಿ. ಉದಾಹರಣೆಗೆ ಡೋನಾ ಡೊರೇಸ್ ನನಗೆ ಹೇಳುತ್ತಾ, "ದೇವರು ಯಾಕೆ ಅಂಗೈಗಳನ್ನು ಮಾತ್ರ ಬಿಳಿಯಾಗಿಸಿದನೆಂದರೆ ಇದರಿಂದ ತಮ್ಮ ಮಾಲೀಕರಿಗೆ ಮಾಡಿದ ಅಡುಗೆ ಗಲೀಜಾಗುವುದಿಲ್ಲ ಅಥವಾ ಮಾಲೀಕರು ಏನಾದರೂ ತಯಾರಿಸಿರೆಂದು ಅಪ್ಪಣೆ ಕೊಟ್ಟಲ್ಲಿ ಅವುಗಳನ್ನು ಶುಚಿಯಾಗಿಟ್ಟಿರಬೇಕಿತ್ತು" ಎಂದಳು.

ಸೆನ್‌ಹರ್ ಆ್ಯಂಟೂನ್ಸ್, ಕೋಕಾಕೊಲಾ ಮನುಷ್ಯ, ಎಲ್ಲಾ ಕೋಕ್ ಟಿನ್ನುಗಳು ಮಾರಾಟವಾಗಿ ಖಾಲಿಯಾದ ನಂತರವೇ ನಮ್ಮ ಹಳ್ಳಿಗೆ ಬರುವವ. "ಎಲ್ಲರೂ ನಿನಗಿಲ್ಲಿಯವರೆಗೆ

ತಿಳಿಸಿದ್ದೆಲ್ಲವೂ ಸುಳ್ಳು" ಎಂದು ನನಗೆ ಹೇಳಿದೆ. ಖಂಡಿತವಾಗಿಯೂ ಆತ ಹೇಳಿದ್ದು ಸತ್ಯವೋ ಗೊತ್ತಿಲ್ಲ. ಆದರೂ ಆತ ತನ್ನನ್ನು ನಂಬುವಂತೆ ಆತ್ಮವಿಶ್ವಾಸದ ಮಾತನಾಡಿದ. ನಾನು "ಹೌದು ಅದು ಸುಳ್ಳು" ಎಂದು ಹೇಳಿದ ನಂತರ ಆತ ಅಂಗೈಗಳೇಕೆ ಕಪ್ಪು ಎಂಬ ವಿಷಯಕ್ಕೆ ಕೊಟ್ಟ ಉತ್ತರ ಹೀಗಿತ್ತು : "ಎಷ್ಟೋ ವರ್ಷಗಳ ಹಿಂದೆ - ದೇವರು, ನಮ್ಮ ಭಗವಾನ್ ಏಸುಕ್ರಿಸ್ತ, ವರ್ಜಿನ್ ಮೇರಿ, ಸೈಂಟ್ ಪೀಟರ್, ಕೆಲಪಾದ್ರಿಗಳು ಮತ್ತು ಎಲ್ಲಾ ದೇವತೆಗಳು ಆಗ ಸ್ವರ್ಗದಲ್ಲಿದ್ದರು. ಇಲ್ಲಿನ ಕೆಲ ಸತ್ತ ಜನರೂ ಆಗ ಸ್ವರ್ಗಕ್ಕೆ ಹೋಗಿದ್ದರು. ಅವರೆಲ್ಲಾ ಒಂದು ಸಭೆ ನಡೆಸಿ ಕಪ್ಪು ಜನರನ್ನು ಸೃಷ್ಟಿಸಿದರು. ಹೇಗೆಂದು ನಿನಗೆ ಗೊತ್ತಾ? ಒಂದಿಷ್ಟು ಜೇಡಿಮಣ್ಣನ್ನು ತೆಗೆದುಕೊಂಡು ಮುದ್ದೆ ಮಾಡಿ ಎರಡನೇ ದರ್ಜೆಯ ಅಚ್ಚುಗಳ ಒಳಗೆ ತೂರಿಸಿದರು. ಆ ಅಚ್ಚುಗಳ ಜೀವಿಗಳನ್ನು ಸುಡಲೆಂದು ಸ್ವರ್ಗದಲ್ಲಿದ್ದ ಇಟ್ಟಿಗೆಯ ಗೂಡಿನೊಳಕ್ಕೆ ತೆಗೆದುಕೊಂಡು ಹೋದರು. ಅವರೆಲ್ಲಾ ತುಸು ಗಡಿಬಿಡಿಯಲ್ಲಿದ್ದುದರಿಂದ ಬೆಂಕಿಯ ಪಕ್ಕದಲ್ಲಿ ಬೇರೆ ಕೋಣೆ ಇರಲಿಲ್ಲ. ಅದಕ್ಕೆ ಚಿಮಣಿಯ ನಳಿಗೆಯ ಒಳಗಡೆ ನೇತುಹಾಕಿದರು. ಹೊಗೆ, ಹೊಗೆ, ಹೊಗೆ - ಅಷ್ಟೆ. ಅವರೆಲ್ಲಾ ಕಪ್ಪು ಕಲ್ಲಿದ್ದಲಿನಂತೆ ತಯಾರಾದರು. ಮತ್ತೆ ನಿನಗೀಗ ತಿಳಿಯಬೇಕೆಂದಿದೆಯೇ, ಅವರ ಅಂಗೈಗಳು ಮಾತ್ರ ಬಿಳಿಯಾಗಿದ್ದುದೇಕೆಂದು? ಸರಿ. ಜೇಡಿ ಮಣ್ಣಿನ ಮುದ್ದೆ ಬೇಯುತ್ತಿರುವಾಗ ಚಿಮಣಿಯೊಳಗಿಂದ ಬೀಳದಂತೆ ಅವರು ಅಂಗೈಗಳಿಂದ ಹಿಡಿದುಕೊಳ್ಳಬೇಕಿತ್ತಲ್ಲ?"

ಹೀಗೆ ಸೆನ್‌ಹರ್ ಆ್ಯಂಟೋನ್ಸ್ ಹೇಳಿದಾಗ ಸುತ್ತ ನೆರೆದಿದ್ದವರೆಲ್ಲಾ ಬಹಳ ತೃಪ್ತಿಪಟ್ಟು ಬಿದ್ದು ಬಿದ್ದು ನಕ್ಕರು. ಆದರೆ ಅದೇ ದಿವಸ ಸೆನ್‌ಹರ್ ಆ್ಯಂಟೋನ್ಸ್ ಹೊರಟುಹೋದ. ನಂತರ ಸೆನ್‌ಹರ್ ಫ್ಲೈಯಾಸ್ ನನ್ನನ್ನು ಕರೆದು ನಾನು ಕೇಳಿದ್ದೆಲ್ಲಾ ಹುಸಿಯೆಂದೂ, ಅವೆಲ್ಲಾ ಸುಳ್ಳುಗಳ ಒಂದು ದೊಡ್ಡ ಕಂತೆಯೆಂದೂ ತಿಳಿಸಿದ. ನಿಜವಾಗಿ ಮತ್ತು ಸತ್ಯವಾಗ್ಲೂ ಕರಿಯರ ಕೈಗಳ ಕುರಿತಂತೆ ಅವನು ತಿಳಿಸಿದ ವಿಷಯ ಸರಿಯಾಗಿತ್ತು - ಏನೆಂದರೆ, "ದೇವರು ಮನುಷ್ಯರನ್ನು ಸೃಷ್ಟಿಸಿದ ನಂತರ ಎಲ್ಲರಿಗೂ ಸ್ವರ್ಗದಲ್ಲಿದ್ದ ಸರೋವರವೊಂದರಲ್ಲಿ ಸ್ನಾನ ಮಾಡಿಬನ್ನಿ ಎಂದು ತಿಳಿಸಿದ. ಸ್ನಾನದ ನಂತರ ಮನುಷ್ಯರೆಲ್ಲಾ ಶುಚಿಯಾಗಿ, ಬಿಳಿಯಾಗಿದ್ದರು. ಆದರೆ ಕರಿಯರು ಮುಂಜಾನೆಯೇ ಎದ್ದುಬಿಟ್ಟಿದ್ದರು. ಆ ಸಮಯದಲ್ಲಿ ಸರೋವರದ ನೀರು ತುಂಬಾ ತಣ್ಣಗಿದ್ದು ಅವರೆಲ್ಲಾ ಬರೇ ತಮ್ಮ ಅಂಗೈ ಹಾಗೂ ಪಾದಗಳನ್ನು ಮಾತ್ರ ನೀರಿನಲ್ಲಿ ತೊಳೆದುಕೊಂಡು ನಂತರ ಬಟ್ಟೆಯುಟ್ಟು ಪ್ರಪಂಚಕ್ಕೆ ಬಂದರು."

ಆದರೆ ನಾನು ಒಂದು ಪುಸ್ತಕದಲ್ಲಿ ಓದಿದ ಪ್ರಕಾರ ಕರಿಯರಿಗೆ ಬಿಳಿ ಅಂಗೈಯಿರಲು ಕಾರಣ ಅವರೆಲ್ಲಾ ಬಾಗಿಕೊಂಡು, ವರ್ಜೀನಿಯಾದ ಹತ್ತಿಯನ್ನು ಸಂಗ್ರಹಿಸುತ್ತಿದ್ದರಂತೆ. ಇನ್ನು ಬೇರೆಲ್ಲಿಂದೆಲ್ಲ ಸಂಗ್ರಹಿಸುತ್ತಿದ್ದರೋ ನಂಗೊತ್ತಿಲ್ಲ. ಆದರೆ ಡೊನಾ ಎಸ್ಪೆಫನಿಯಾಳಿಗೆ ನಾನಿದನ್ನು ತಿಳಿಸಿದಾಗ ಆಕೆಯಂತೂ ನಂಬಲೇ ಇಲ್ಲ. ಆಕೆಯ ಪ್ರಕಾರ ಅಂಗೈಗಳು ತೊಳೆಯುವುದರಿಂದಲೇ ಬಿಳಿಯಾದುವಂತೆ.

ಸರಿ, ನನಗೆ ಈ ಕುರಿತು ಏನು ಆಲೋಚಿಸಬೇಕೆಂದು ಒಂದೂ ತಿಳಿಯುತ್ತಿಲ್ಲ. ಉತ್ತರ ಏನೇ ಇರಲಿ, ಒಬ್ಬ ಕರಿಯನ ಅಂಗೈಯಂತೂ ಅವನ ದೇಹದ ಉಳಿದ ಭಾಗಗಳಿಗಿಂತ ಬಿಳಿಯಾಗಿರುವುದಂತೂ ಸತ್ಯ, ಅಷ್ಟೇ!

ಕರಿಯರ ಅಂಗೈ ಉಳಿದ ಭಾಗಗಳಿಗಿಂತ ಬಿಳಿ ಯಾಕೆಂದು ಬಹುಶಃ ನನ್ನ ಅಮ್ಮನ ಜವಾಬು ಮಾತ್ರ ಸರಿಯಾಗಿರಲು ಸಾಧ್ಯ. ಈ ವಿಷಯದ ಕುರಿತು ನಂಗೊತ್ತಿದ್ದ ಎಲ್ಲಾ ಉತ್ತರಗಳನ್ನು ನಾನಾಕೆಗೆ ತಿಳಿಸಿದಾಗ ಅವಳಿಗೆ ನಗುತಡೆಯಲಾಗಲಿಲ್ಲ. ಇಷ್ಟೆಲ್ಲಾ ಉತ್ತರಗಳ ಬಗ್ಗೆ ಆಕೆಗೆ ಏನು ಅನಿಸಿತ್ತೋ ಗೊತ್ತಿಲ್ಲ. ಈ ಕುರಿತು ಅವಳು ನನಗೇನೂ ಹೇಳಲಿಲ್ಲ. ನನಗಾಗ ವಿಚಿತ್ರವೆನಿಸಿತು. ಆದರೆ ಪುನಃ ಈ ಪ್ರಶ್ನೆಯನ್ನು ಕೇಳಿ ನಾನಾಕೆಗೆ ಕಾಟಕೊಡಬಾರದೆಂದು ಖಾತ್ರಿಮಾಡಿಕೊಂಡ ನಂತರವೇ ಅವಳು ಉತ್ತರಿಸಿದಳು. ಆಗಲೂ ಕೂಡ ಆಕೆ ಹೊಟ್ಟೆಯ ಮೇಲೆ ಕೈಯಿಟ್ಟು ಕಣ್ಣುಗಳಲ್ಲಿ ನೀರು ತಂದುಕೊಂಡು ಅದುಮಿಟ್ಟುಕೊಳ್ಳಲಾರದೆ ಗಹಗಹಿಸಿ ನಗುತ್ತಿದ್ದಳು. ಆಕೆ ಹೇಳಿದ್ದು ಹೆಚ್ಚುಕಮ್ಮಿ ಹೀಗೆಯೇ ಇತ್ತು:

“ದೇವರು ಕರಿಯರನ್ನು ಮಾಡಿದ್ದೇಕೆಂದರೆ ಅಂತಹವರನ್ನು ಸೃಷ್ಟಿಸಲೇಬೇಕಿತ್ತು. ಸೃಷ್ಟಿ ಮಾಡಲೇಬೇಕಿತ್ತು.....ಮಗೂ. ಅವ ಅಂತಹವರನ್ನು ನಿಜವಾಗಿಯೂ ಹುಟ್ಟಿಸಲೇಬೇಕಿತ್ತು. ಆದರೆ ಕರಿಯರನ್ನು ಸೃಷ್ಟಿಸಿದ ನಂತರ ಆತನಿಗೆ ಬಹಳ ಪಶ್ಚಾತ್ತಾಪವಾಯಿತು. ಯಾಕೆಂದರೆ ಉಳಿದವರು ಕರಿಯರನ್ನು ನೋಡಿ ನಗುತ್ತಿದ್ದರು; ಅಷ್ಟೇ ಅಲ್ಲ, ಸೀದಾ ತಮ್ಮ ಮನೆಗಳಿಗೆ ಎತ್ತಿಕೊಂಡು ಹೋಗಿ ಗುಲಾಮರನ್ನಾಗಿ ತಮ್ಮ ಸೇವೆ ಮಾಡಲು ಇಟ್ಟುಕೊಳ್ಳುತ್ತಿದ್ದರು. ಆತ ಅವರೆಲ್ಲರನ್ನೂ ಬಿಳಿಯರನ್ನಾಗಿ ಮಾಡಬಹುದಿತ್ತು. ಆದರೆ ಈಗಾಗಲೇ ನೋಡಿ ಅಭ್ಯಾಸವಾದವರು ದೂರುವ ಸಂಭವ ಇದ್ದುದರಿಂದ ಆತ ಕರಿಯರ ಅಂಗೈಗಳನ್ನು ಮಾತ್ರ ಉಳಿದವರಂತೆ ಮಾಡಿದ. ನಿಂಗೊತ್ತಾ ಹಾಗ್ಯಾಕೆ ಮಾಡಿದನೆಂದು? ಖಂಡಿತವಾಗಿಯೂ ನಿಂಗೊತ್ತಿರಲಿಕ್ಕಿಲ್ಲ. ಮತ್ತು ಹೆಚ್ಚಿನವರಿಗೆ ತಿಳಿಯದಿದ್ದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಸರಿ, ಕೇಳು : ಮನುಷ್ಯ ಮಾಡುವ ಕೆಲಸಗಳೆಲ್ಲಾ ಮನುಷ್ಯರದ್ದೇ ತಾನೆ..... ಮತ್ತು ಮಾಡುವ ಎಲ್ಲಾ ಕೆಲಸಗಳೂ ಒಂದೇ ಬಗೆಯ ಕೈಗಳಿಂದ ಮಾಡಲ್ಪಡುತ್ತವೆ - ಸ್ವಲ್ಪವಾದರೂ ತಿಳಿವಳಿಕೆಯಿದ್ದವರು ತಾವು ಮೊದಲು ಮನುಷ್ಯರೆಂಬ ಅರಿವು ಹೊಂದಿದವರಾಗಿರಬೇಕು. ಬಹುಶಃ ದೇವರು ಈ ಕುರಿತು ಆಲೋಚಿಸುತ್ತಲೇ ಕರಿಯರನ್ನು ಸೃಷ್ಟಿಸಿರಬೇಕು. ಆದ್ದರಿಂದಲೇ ಆತ ಕರಿಯರ ಕೈಗಳನ್ನು ಕರಿಯರನ್ನಾಗಿ ನಮ್ಮನ್ನು ಹುಟ್ಟಿಸಲಿಲ್ಲವಲ್ಲ ಎಂದು ಧನ್ಯವಾದಗಳನ್ನು ಹೇಳುವವರ ಕೈಗಳಂತೆಯೇ ತಯಾರಿಸಿದ.

ಇದನ್ನೆಲ್ಲಾ ಹೇಳಿದ ನಂತರ, ತಾಯಿ ನನ್ನ ಕೈಗಳನ್ನು ಚುಂಬಿಸಿದಳು. ಚೆಂಡು ಆಡಲೆಂದು ನಾನು ಮೈದಾನಕ್ಕೋಡಿದಾಗ ಅಮ್ಮನತ್ತ ನೋಡಿದೆ. “ಯಾರೂ ಹೊಡೆಯದಿದ್ದರೂ ಕೂಡಾ ಇಷ್ಟೊಂದು ಅಳುವವರನ್ನು ನಾನು ನೋಡಿರಲೇ ಇಲ್ಲ” ಅನ್ನಿಸಿತು.

□

---

ಡಾ. ಹರಿಚರಣ್ ಶೆಣ್ವೊ, ಪೂರ್ಣ ಹೋಮಿಯೋ ಕ್ಲಿನಿಕ್, ಕೊಲ್ಲಮ್ಮ ನಿಲಯ ಮುಖ್ಯರಸ್ತೆ
ಕುಂದಾಪುರ - ೫೭೬೨೦೧, ಉಡುಪಿ ಜಿಲ್ಲೆ
ದೂ : (೦೮೨೫೪) ೨೨೨೮೨೪ (ಕ್ಲಿನಿಕ್), ೨೨೧೧೧೮ (ಮನೆ)
e-mail : poornahomeo@hotmail.com

# ಕಂಠಹಾರ

ಮೂಲ : ಗೈ ದ ಮೊಪಸಾ
ಕನ್ನಡ ಭಾವಾನುವಾದ : ವಿ. ಶ್ರೀನಿವಾಸ

ವಿಧಿವೈಚಿತ್ರ್ಯದಿಂದಾಗಿ ಕೂಲಿಕಾರರ ಕುಟುಂಬದಲ್ಲಿ ಜನಿಸಿದ ಸುಂದರ ತರುಣಿಯರಲ್ಲಿ ಆಕೆಯೂ ಒಬ್ಬಳು. ಆಕೆಯ ಬಳಿ ಸಂಪತ್ತಿರಲಿಲ್ಲ. ಆಕೆಗೆ ಯಾವ ನಿರೀಕ್ಷೆ - ಭರವಸೆಗಳೂ ಇರಲಿಲ್ಲ. ಆಕೆಯ ಆಸೆ -ಆಕಾಂಕ್ಷೆಗಳು ಈಡೇರುವಂತೆಯೇ ಇರಲಿಲ್ಲ - ಆಕೆ ಯಾವನಾದರೊಬ್ಬ ಗಣ್ಯಶ್ರೀಮಂತನ ಕೈ ಹಿಡಿದ ಹೊರತು. ಆಕೆಗೆ ಅಂತಹ ಯಾವ ಗಣ್ಯವ್ಯಕ್ತಿಯ ಪರಿಚಯವಿರಲಿಲ್ಲ. ತನ್ನ ಕುಟುಂಬದ ವಾತಾವರಣದಿಂದ ತಪ್ಪಿಸಿಕೊಳ್ಳಲು ಆಕೆ ಶಿಕ್ಷಣ ಮಂತ್ರಿಗಳ ಕಾರ್ಯಾಲಯದ ಓರ್ವಗುಮಾಸ್ತನನ್ನು ವಿವಾಹವಾದಳು.

ಆಕೆ ಉಡುಗೆ - ತೊಡುಗೆಗಳ ಅಲಂಕಾರದಲ್ಲಿ ಮೆರೆಯಲು ಸಾಧ್ಯವಿರಲಿಲ್ಲವಾದ್ದರಿಂದ ಸಾದಾ ಉಡುಪನ್ನು ಧರಿಸುತ್ತಿದ್ದಳು. ಆದರೆ, ಆಕೆ ಶ್ರೀಮಂತಿಕೆಯಿಂದ, ಉನ್ನತ ಸಾಮಾಜಿಕ ಸ್ಥಾನದಿಂದ ಬಡತನದ ಹೀನಸ್ಥಿತಿಗೆ ಇಳಿದವಳೋ ಎಂಬಂತೆ ಅಸುಖಿಯಾಗಿದ್ದಳು. ಏಕೆಂದರೆ, ಶ್ರೀಮಂತಿಕೆಯಾಗಲಿ, ಸಾಮಾಜಿಕ ಸ್ಥಾನ - ಮಾನಗಳಾಗಲಿ ಇಲ್ಲದ ಮಹಿಳೆಯರು ತಮ್ಮ ಚೆಲುವು, ಬೆಡಗು- ಬಿನ್ನಾಣಗಳನ್ನೇ ತಮಗೆ ಅನ್ಯ ರೀತಿಯಲ್ಲಿ ಏರಲು ಅಸಾಧ್ಯವಾದ ಉನ್ನತ ಸ್ಥಾನಗಳಿಗ ಏರಲು ಸೋಪಾನಗಳನ್ನಾಗಿ ಬಳಸಿಕೊಳ್ಳುತ್ತಾರೆ. ಅವರ ಪಿತ್ರಾರ್ಜಿತ ಆಸ್ತಿಯೆಂದರೆ ಸ್ವಾಭಾವಿಕ ಚಾತುರ್ಯ, ನಯ-ನಾಜೂಕು ಮತ್ತು ಸೂಕ್ಷ್ಮಬುದ್ಧಿ. ಈ ಆಸ್ತಿಯನ್ನು ಚಾತುರ್ಯದಿಂದ ಬಳಸಿಕೊಂಡದ್ದಾದರೆ, ಅವರು ತಮಗಿಂತ ಹೆಚ್ಚು ಭಾಗ್ಯಶಾಲಿಗಳಾದ ಮಹಿಳೆಯರ ಸರಿಸಮಾನರಾಗಿ ಬಿಡುತ್ತಾರೆ. ತನ್ನ ಬಡಮನೆಯ ಸುತ್ತ ಕಣ್ಣಾಡಿಸಿದಾಗ, ಅಲ್ಲಿ ಶ್ರೀಮಂತರು ಮಾತ್ರ ಅನುಭವಿಸಬಹುದಾದ ಭೋಗ -ವೈಭವಗಳೊಂದೂ ಇಲ್ಲದ್ದನ್ನು ಗಮನಿಸಿ ಆಕೆ ಒಂದೇ ಸಮನೆ

ಮನನೊಂದುಕೊಳ್ಳುತ್ತಿದ್ದಳು. ಒಂದು ಮಾತಿನಲ್ಲಿ ಹೇಳುವುದಾದರೆ ಆಕೆಯ ಅಂತಸ್ತಿನ ಮತ್ತೊಬ್ಬ ಮಹಿಳೆ ಗಮನಿಸುತ್ತಲೇ ಇರದಿದ್ದಂತಹ ಕ್ಷುಲ್ಲಕ ವಿಷಯಗಳೂ, ಸಣ್ಣ - ಪುಟ್ಟ ಕೊರತೆಗಳೂ ಆಕೆಗೆ ಹಿಂಸೆಯನ್ನುಂಟುಮಾಡಿ, ಮನನೋಯಿಸುತ್ತಿದ್ದುವು. ಹಳೆಯ ಬ್ರಿಟನ್‌ನ ರೈತ ಮಹಿಳೆ ತನ್ನ ಸರಳ ಗೃಹಕೃತ್ಯದ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದುದನ್ನು ಕಂಡಾಗ, ಆಕೆಯ ಮನಸ್ಸಿನಲ್ಲಿ ವ್ಯರ್ಥಲಾಲಸೆಗಳೂ, ನೆಮ್ಮದಿ ಕೆಡಿಸುವ ಕನಸುಗಳೂ ಕೆರಳುತ್ತಿದ್ದುವು.

ಆಕೆ ಕನಸು ಕಾಣುತ್ತಿದ್ದಳು. ಆಕೆಯ ಕನಸಿನಲ್ಲಿ....... ಸುಂದರವಾದ ಹಾಲ್‌ಗಳು. ಅವುಗಳಲ್ಲಿ ದೊಡ್ಡ ದೊಡ್ಡ ಕಂಚಿನ ದೀಪಸ್ತಂಭಗಳಲ್ಲಿ ಬೆಳಗುತ್ತಿದ್ದ ಮೇಣದ ಬತ್ತಿಗಳು; ಹೆಜ್ಜೆಯ ಸಪ್ಪಳ ಕೇಳಿಬರದ ಬೆಲೆಬಾಳುವ ಜಮಖಾನಗಳು; ಪೌರ್ವಾತ್ಯದೇಶಗಳಿಂದ ತರಿಸಿದ ರೇಷ್ಮೆ ಪರದೆಗಳು; ಕ್ಷಣಮಾತ್ರದಲ್ಲಿ ಯಜಮಾನರ ಪ್ರತಿಯೊಂದು ಅಗತ್ಯವನ್ನು ಪೂರೈಸಲು ಸಿದ್ಧರಾಗಿ, ದೊಡ್ಡ ಆರಾಮ ಕುರ್ಚಿಗಳಲ್ಲಿ ಕುಳಿತು ತೂಕಡಿಸುತ್ತಿರುವ ಅತಿ ವಿಧೇಯ ಸೇವಕರು; ಪುರಾತನ ರೇಷ್ಮೆ ಬಟ್ಟೆಗಳನ್ನು ಹೊದಿಸಿದ ದಿವಾನ್ ಖಾನೆಗಳು-ಅಲ್ಲದೆ "ಐದು ಗಂಟೆ" ಸ್ನೇಹಕೂಟಕ್ಕಾಗಿ ಸಿದ್ಧಪಡಿಸಿದ ಪುಟ್ಟ, ಬೆಡಗಿನ ದಿವಾನ್‌ಖಾನೆಗಳೂ, ಪ್ರತಿಯೊಬ್ಬ ಮಹಿಳೆಯೂ ಗಮನ ಸೆಳೆಯಲು ಹಾತೊರೆಯುತ್ತಿದ್ದ ಆಪ್ತರು ಅಥವಾ ಖ್ಯಾತ ಸಾಹಿತಿಗಳು ಆಕೆಯ ಮನಃಪಟಲದ ಮುಂದೆ ಸುಳಿದು ಹೋದದ್ದೂ ಉಂಟು.

ಆಕೆ ಮೇಜಿನ ಮುಂದೆ ಕುಳಿತಾಗ (ಅದರ ಮೇಲೆ ಹಾಸಿದ ಬಟ್ಟೆಯನ್ನು ಬದಲಾಯಿಸಿ ಮೂರು ದಿನಗಳಾಗಿತ್ತು) ಅಥವಾ ಸಂಜೆ ಊಟದಿಂದ ಸಂತೃಪ್ತನಾಗಿದ್ದ ಗಂಡನ ಎದುರಿಗೆ ಕುಳಿತಾಗ, ಆಕೆಯ ಕಲ್ಪನೆ ಆಕೆಯನ್ನು ಶ್ರೀಮಂತರ ಭವ್ಯ ಭೋಜನ ಶಾಲೆಗಳಿಗೆ ಕೊಂಡೊಯ್ಯುತ್ತಿತ್ತು. ಸುಂದರವಾದ ಚಿತ್ರ ಜವನಿಕೆಗಳಿಂದ ಅಲಂಕರಿಸಿದ ಗೋಡೆಗಳು, ಹೊಳೆಯುವ ಬೆಳ್ಳಿ ಪಾತ್ರೆಗಳು, ಆಶ್ಚರ್ಯಕರವಾದ ತಟ್ಟೆ - ಲೋಟಗಳಲ್ಲಿ ಲಕ್ಷಣವಾಗಿ ಬಿಡಿಸಿದ ತನಗೆ ಪರಿಚಿತವಲ್ಲದ ಭಕ್ಷ್ಯ - ಭೋಜ್ಯಗಳು, ಗುಲಾಬಿಬಣ್ಣದ ಸಿಹಿನೀರಿನ ಮೀನನ್ನು ತಿನ್ನುತ್ತಲೋ ಇಲ್ಲವೆ ಟಿಟ್ಟಿಭ ಪಕ್ಷಿಯ ರೆಕ್ಕೆಯನ್ನು ನಿಧಾನವಾಗಿ ಸೇವಿಸುತ್ತಲೋ, ಪುರುಷರ, ಸ್ತ್ರೀಲೋಲುಪತೆಯ ಪಿಸುಮಾತುಗಳನ್ನು ಅನುಭವಿ ಮಹಿಳೆಯರು ಕೇಳಿ, ತಮ್ಮ ಭಾವೋದ್ವೇಗಗಳನ್ನು ತಮ್ಮೊಳಗೆ ಅಡಗಿಸಿಕೊಂಡು ನೃಸಿಂಹಿಣಿ (Sphinx) ಯಂತೆ ಮಂದಹಾಸದಿಂದ ಕೇಳುತ್ತಿದ್ದುದನ್ನು ಆಕೆ ಮನಸ್ಸಿನಲ್ಲಿಯೇ ಚಿತ್ರಿಸಿಕೊಳ್ಳುತ್ತಿದ್ದಳು. ಆಕೆಯ ಬಳಿ ವಿಶೇಷ ಉಡುಪುಗಳಿರಲಿಲ್ಲ; ಒಡವೆಗಳಿರಲಿಲ್ಲ. ಅವುಗಳಿಗಾಗಿ ಸದಾ ಹಾತೊರೆಯುತ್ತಿದ್ದಳು - ಚುರುಕಾಗಿ ಸಾಗುವ ಅರಬನು ತನ್ನ ಸ್ವಸ್ಥಳವಾದ ಮರುಭೂಮಿಗಾಗಿ ಹಾತೊರೆಯುವಂತೆ. ಅಹಾ ! ಅನ್ಯರನ್ನು ಸಂತೋಷಪಡಿಸಿ, ಎಲ್ಲರೂ ತನ್ನನ್ನು ಕಂಡು ಕರುಬುವಂತೆ ಮಾಡಿ; ತಾನು ಎಲ್ಲರ ಮನಗಳನ್ನು ಸೂರೆಗೊಂಡು, ಎಲ್ಲರೂ ತನಗಾಗಿ ಹಾತೊರೆಯುವಂತೆ ಮಾಡುವುದರಲ್ಲಿ ಎಂತಹ ಆನಂದವಿದೆ!

ಆಕೆಯ ಶ್ರೀಮಂತ ಸ್ನೇಹಿತೆಯೊಬ್ಬಳಿದ್ದಳು - ಸನ್ಯಾಸಿಮಠದ ಗೆಳತಿ. ಆಕೆ ಅವಳ ಮನೆಗೆ ಹೋಗುವುದನ್ನೇ ನಿಲ್ಲಿಸಿಬಿಟ್ಟಳು. ಕಾರಣವಾದರೂ ಏನು ಗೊತ್ತೇ? ತನ್ನ ಅಳವಿಗೆ ನಿಲುಕದ, ತಾನು ಕೊಂಡಿಟ್ಟುಕೊಳ್ಳಲಾಗದಿದ್ದಂತಹ ಸಾಮಾನುಗಳನ್ನು ತನ್ನ ಗೆಳತಿಯ ಮನೆಯಲ್ಲಿ ಕಂಡು, ನೊಂದು, ಮನೆಗೆ ಬಂದು ದಿನಗಟ್ಟಲೆ ದುಃಖ, ವಿಷಾದ, ನಿರಾಶೆ ಮತ್ತು ಸಂಕಟಗಳಿಂದ ಅತ್ತು ಅತ್ತು ಬೇಸತ್ತಳು. ಈ ಕಾರಣಕ್ಕಾಗಿಯೇ ತನ್ನ ಗೆಳತಿಯ ಮನೆಗೆ ಹೋಗುವುದನ್ನೇ ನಿಲ್ಲಿಸಿಬಿಟ್ಟಳು!

ಒಂದು ದಿನ ಸಂಜೆ ಆಕೆಯ ಗಂಡ ಕೈಯಲ್ಲಿ ಲಕೋಟೆಯೊಂದನ್ನು ಹಿಡಿದು, ಸಂತೋಷದಿಂದ ಬೀಗುತ್ತ ಮನೆಗೆ ಬಂದ.

"ನೋಡು. ಇದನ್ನು ನಿನಗಾಗಿ ತಂದಿದ್ದೇನೆ" ಎಂದ, ಆತ. ಆಕೆ ಉದ್ರೇಕದಿಂದ ಲಕೋಟೆಯ ತುದಿಯನ್ನು ಹರಿದು ಒಳಗಿದ್ದ ಆಮಂತ್ರಣ ಪತ್ರಿಕೆಯನ್ನು ಹೊರತೆಗೆದಳು. ಅದರ ಒಕ್ಕಣೆ ಹೀಗಿತ್ತು:

"ಸಾರ್ವಜನಿಕ ಶಿಕ್ಷಣ ಮಂತ್ರಿಗಳು ಮತ್ತು ಶ್ರೀಮತಿ ಜಾರ್ಜೆಸ್ ರ್‍ಯಾಂಪೊನೆಯವರು ಜನವರಿ ೧೮ರ ಸೋಮವಾರ ಸಂಜೆ ಶ್ರೀ ಮತ್ತು ಶ್ರೀಮತಿ ಲಾಯ್ಸೆಲ್ ಅವರ ಸುಖಾಗಮನವನ್ನು ಕೋರುತ್ತಾರೆ."

ಆತ ನಿರೀಕ್ಷಿಸಿದ್ದಂತೆ ಆಕೆ ಹಿಗ್ಗಿ ಹೀರೇಕಾಯಿ ಆಗಲಿಲ್ಲ. ಬದಲಾಗಿ, ಆಕೆ ಆಹ್ವಾನ ಪತ್ರಿಕೆಯನ್ನು ಮೇಜಿನ ಮೇಲೆ ಎಸೆದು ಬೇಸರದ ಆವೇಶಪೂರ್ಣ ಉದ್ಗಾರ ತೆಗೆದು, ಸಿಟ್ಟಿನಿಂದ:

"ಅದನ್ನು ತೆಗೆದುಕೊಂಡು ನಾನೇನು ಮಾಡಬೇಕೆನ್ನುವೆ?" ಎಂದು ಕೇಳಿದಳು. "ಆದರೆ, ಪ್ರಿಯೆ, ನಿನಗೆ ಸಂತೋಷವಾಗವುದೆಂದು, ನಾನು ತಿಳಿದಿದ್ದೆ. ನೀನು ಹೊರಗೆ ಹೋಗುವುದೇ ಇಲ್ಲ. ಇದೊಂದು ಸಮಾರಂಭ, ಅವಕಾಶ. ಈ ಆಹ್ವಾನ ಪತ್ರಿಕೆಯನ್ನು ದೊರಕಿಸಿಕೊಳ್ಳಲು ನಾನು ತುಂಬ ಶ್ರಮ ಪಟ್ಟಿದ್ದೇನೆ. ಪ್ರತಿಯೊಬ್ಬರೂ ಆಹ್ವಾನ ಪತ್ರಿಕೆಗಾಗಿ ಬಾಯಿ - ಬಾಯಿ ಬಿಡುತ್ತಾರೆ. ಸಾಮಾನ್ಯವಾಗಿ, ನೌಕರರಿಗೆ ಅವುಗಳನ್ನು ಕೊಡುವುದಿಲ್ಲ. ಇಡೀ ಅಧಿಕಾರಿವರ್ಗವೇ ಅಲ್ಲಿ ಸೇರಿರುತ್ತದೆ."

ಆಕೆ ಆತನನ್ನು ತುಂಬ ತಿರಸ್ಕಾರದಿಂದ ನೋಡಿ, ತಾಳ್ಮೆಯಿಲ್ಲದೆ ನುಡಿದಳು :

"ನಾನು ಏನನ್ನು ತೊಟ್ಟುಕೊಳ್ಳಲಿ?" ಈಗ ಗುಟ್ಟು ರಟ್ಟಾಯಿತು.

ಪುರುಷ ಸಹಜವಾಗಿ, ಆತ ಅದರ ಬಗ್ಗೆ ಯೋಚಿಸಿಯೇ ಇರಲಿಲ್ಲ.

"ಆದರೆ, - ಉಡುಪು - ನೀನು ರಂಗಮಂದಿರಕ್ಕೆ ಹೋಗುವಾಗ ತೊಟ್ಟುಕೊಳ್ಳುವ ಉಡುಪು - ಇದೆಯಲ್ಲ. ಅದನ್ನು ತೊಟ್ಟಾಗ ನೀನು ನನ್ನ ಕಣ್ಣಿಗೆ ತುಂಬ ಸುಂದರಿಯಾಗಿಯೇ ಕಾಣಿಸುತ್ತೀಯೆ" ಎಂದು ತೊದಲಿದ.

ಆಕೆಯ ಕಣ್ಣುಗಳಲ್ಲಿ ನೀರು ತುಂಬಿಕೊಂಡದ್ದನ್ನು ಕಂಡು ಆತ ದಿಗಿಲುಗೊಂಡು, ದಿಙ್ಮೂಢನಾಗಿ, ಅವಾಕ್ಕಾದ. ಎರಡು ದೊಡ್ಡ ಕಣ್ಣೀರ ಹನಿಗಳು ಆಕೆಯ ಕೆನ್ನೆಗಳ ಮೇಲಿಂದ ಮೆಲ್ಲನೆ ಉರುಳಿದವು.

"ಏನು ವಿಷಯ? ಏನು ವಿಷಯ?" ಎಂದು ಮೃದುವಾಗಿ ಆತ ಕೇಳಿದ. ತನ್ನ ದುಃಖವನ್ನು ಬಲವಂತವಾಗಿ ಅದುಮಿಟ್ಟುಕೊಂಡು, ತನ್ನ ಒದ್ದೆಕೆನ್ನೆಗಳನ್ನು ಒರೆಸಿಕೊಳ್ಳುತ್ತ ಶಾಂತವಾಗಿ ಹೇಳಿದಳು :

"ಏನೂ ಇಲ್ಲ. ನನ್ನ ಬಳಿ ವಸ್ತ್ರಾಭರಣಗಳಿಲ್ಲ. ನಾನಂತೂ ಹೋಗುವಂತಿಲ್ಲ. ಈ ಸಮಾರಂಭಕ್ಕೆ ಹಾಕಿಕೊಂಡು ಹೋಗಲು ಸೂಕ್ತವಾದ ಒಡವೆ ವಸ್ತ್ರಗಳನ್ನುಳ್ಳ ಭಾಗ್ಯಶಾಲಿ ಪತ್ನಿ ಇರುವ ನಿನ್ನ ಗೆಳೆಯನೊಬ್ಬನಿಗೆ ಆಮಂತ್ರಣ ಪತ್ರಿಕೆಯನ್ನು ಕೊಡು."

ಹತಾಶನಾಗಿ ಆತ ಹೇಳಿದ :

"ಮತಿಲ್ಡೆ, ಈ ನೃತ್ಯ ಕಾರ್ಯಕ್ರಮಕ್ಕೆ ಹಾಕಿಕೊಂಡು ಹೋಗುವ ಉಡುಪಿನ ಬೆಲೆ ಎಷ್ಟಾಗಬಹುದು? ಇತರ ಸಂದರ್ಭಗಳಲ್ಲಿ ಹಾಕಿಕೊಂಡು ಹೋಗಬಹುದಾದ ತೀರ ಸರಳ ಉಡುಪಿಗೆ ಎಷ್ಟಾಗಬಹುದು?"

ಆಕೆ ಕೆಲವು ಕ್ಷಣಗಳ ಕಾಲ ಯೋಚಿಸಿದಳು. ತನ್ನ ಗಂಡ ಮಿತವ್ಯಯಿ. ಆತ ಹೆದರಿ ಇಷ್ಟೊಂದು ಹಣ ವೆಚ್ಚ ಮಾಡುವುದು ತನ್ನಿಂದ ಸಾಧ್ಯವಿಲ್ಲವೆಂದು ಒಮ್ಮೆಲೇ ಹೇಳಿಬಿಡುವ ಅಪಾಯವಿಲ್ಲದಂತೆ ಎಷ್ಟು ಹಣವನ್ನು ಕೇಳಬಹುದೆಂಬುದನ್ನು ಆಕೆ ತನ್ನ ಮನಸ್ಸಿನಲ್ಲಿಯೇ ಲೆಕ್ಕ ಹಾಕಿಕೊಂಡಳು. ಕಡೆಗೆ, ಹಿಂದೆ - ಮುಂದೆ ನೋಡುತ್ತಲೇ ಹೇಳಿದಳು:

"ನನಗೆ ನಿಖರವಾಗಿ ತಿಳಿಯದು. ಸುಮಾರು ೪೦೦ ಫ್ರಾಂಕ್‌ಗಳಾದರೆ ಹೇಗೋ ನಿರ್ವಹಿಸಬಲ್ಲೆನೆಂದು ತೋರುತ್ತದೆ."

ಆತ ಸ್ವಲ್ಪ ಸಪ್ಪೆ ಮೋರೆ ಮಾಡಿದ. ಏಕೆಂದರೆ, ಮುಂದಿನ ಬೇಸಿಗೆಯಲ್ಲಿ ಭಾನುವಾರಗಳಂದು ಸ್ನೇಹಿತರೊಂದಿಗೆ ಟಿಟ್ಟಿಭ ಪಕ್ಷಿಗಳ ಬೇಟೆಗಾಗಿ ನಾನ್ ಟೆರ್ರೆ ಬಯಲು ಸೀಮೆಗೆ ಹೋಗಲು ಒಂದು ಬಂದೂಕನ್ನು ಖರೀದಿಸುವ ಸಲುವಾಗಿ ಸರಿಯಾಗಿ ಅಷ್ಟೇ ಮೊಬಲಗನ್ನು ಉಳಿಸಿಟ್ಟುಕೊಂಡಿದ್ದ.

ತನ್ನ ಅನುತಾಪವನ್ನು ತೋರಗೊಡದೆ ಆತ ಜವಾಬಿತ್ತ :

"ಆಗಲಿ, ನಾನು ನಿನಗೆ ೪೦೦ ಫ್ರಾಂಕ್‌ಗಳನ್ನು ಕೊಡುತ್ತೇನೆ. ಆದರೆ, ಸುಂದರವಾದ ಉಡುಪನ್ನು ಕೊಳ್ಳಲು ಪ್ರಯತ್ನಿಸು"

ಮೇಜವಾನಿಯ ದಿನ ಸಮೀಪಿಸಿತು. ಶ್ರೀಮತಿ ಲಾಯ್ಸೆಲ್ ದುಃಖ, ಕಾತರಗಳಿಂದ ಚಡಪಡಿಸಲಾರಂಭಿಸಿದಳು. ಆಕೆಯ ವಿಶೇಷ ಉಡುಪು ಕೂಡ ಸಿದ್ಧವಾಯಿತು. ಮತ್ತೇನಿರಬಹುದು? ಒಂದು ದಿನ ಆಕೆಯ ಗಂಡ ಕೇಳಿದ :

"ಏನು ವಿಷಯ? ಕಳೆದ ಕೆಲವು ದಿನಗಳಿಂದ ನಿನ್ನ ನಡತೆ ತುಂಬ ವಿಚಿತ್ರವಾಗಿದೆ."

"ನನ್ನ ಬಳಿ ಒಂದೇ ಒಂದು ಆಭರಣ, ಒಂದೇ ಒಂದು ಅಮೂಲ್ಯ ಹರಳು ಇಲ್ಲದಿರುವುದೇ ನನಗೆ ಚಿಂತೆಯಾಗಿದೆ. ನಾನು ಅದೆಂತಹ ಬಡ, ತಿರಸ್ಕರಣೀಯ ವ್ಯಕ್ತಿಯಾಗುತ್ತೇನೆ! ನಾನು ಹೋಗದಿರುವುದೇ ಮೇಲೆಂದು ತೋರುತ್ತದೆ" ಎಂದಳು.

"ನೀನು ಗಿಡ-ಮರಗಳಲ್ಲಿ ಬೆಳೆದು ನಿಂತಿರುವ ನೈಸರ್ಗಿಕ ಪುಷ್ಪಗಳನ್ನು ಧರಿಸಬಹುದು. ಈ ಋತುವಿನಲ್ಲಿ ಎಲ್ಲರೂ ಹೂವುಗಳಿಗಾಗಿ ಬಾಯಿ-ಬಾಯಿ ಬಿಡುತ್ತಿದ್ದಾರೆ. ಎರಡು ಅಥವಾ ಮೂರು ಸೊಗಸಾದ ಗುಲಾಬಿ ಹೂವುಗಳ ಬೆಲೆ ಹತ್ತು ಫ್ರಾಂಕ್‌ಗಳು."

ಆದರೆ, ಆಕೆಗೆ ಈ ಮಾತು ಒಪ್ಪಿಗೆಯಾಗಲಿಲ್ಲ.

"ಇಲ್ಲ. ಅಷ್ಟೊಂದು ಶ್ರೀಮಂತ ಮಹಿಳೆಯರ ನಡುವೆ ವಸ್ತ್ರಾಭರಣಗಳಿಲ್ಲದೆ ಹೋಗುವುದಕ್ಕಿಂತ ಹೆಚ್ಚು ಅಪಮಾನಕರವಾದದ್ದು ಬೇರೊಂದಿಲ್ಲ."

"ಆದರೆ, ನೀನೆಂಥ ದಡ್ಡಿ! ನಿನ್ನ ಸ್ನೇಹಿತ ಫಾರೆಸ್ಟಿಯರ್ ಬಳಿಗೆ ಹೋಗಿ ಆಕೆಯ ಆಭರಣಗಳನ್ನು ಎರವಲಾಗಿ ಕೊಡುವಂತೆ ಕೇಳು. ನಿನಗೆ ಆಕೆಯೊಡನೆ ಆಕೆಯ ಒಡವೆಗಳನ್ನು ಕೇಳುವಷ್ಟು ಸ್ನೇಹ, ಸಲುಗೆ ಇದ್ದೇ ಇದೆಯಲ್ಲ."

ಆಕೆ ಸಂತೋಷದಿಂದ,

"ಹೌದು, ನಿಜ. ನಾನು ಅದರ ಬಗ್ಗೆ ಯೋಚಿಸಿಯೇ ಇರಲಿಲ್ಲ."

ಮಾರನೆಯ ದಿನ ಆಕೆ ತನ್ನ ಗೆಳತಿಯ ಮನೆಗೆ ಹೋಗಿ ತನ್ನ ಸಂಕಟದ ಪರಿಸ್ಥಿತಿಯನ್ನು ವಿವರಿಸಿದಳು. ಶ್ರೀಮತಿ ಫಾರೆಸ್ಟಿಯರ್ ಒಳ ಕೋಣೆಗೆ ಹೋಗಿ ಒಂದು ದೊಡ್ಡ ಆಭರಣಗಳ ಪೆಟ್ಟಿಗೆಯನ್ನು ತಂದು ತೆರೆದು ಹೇಳಿದಳು :

"ನಿನಗೆ ಬೇಕಾದ್ದನ್ನು ಆರಿಸಿಕೊ. ಅವೆಲ್ಲ ನಿನಗಾಗಿಯೇ ಇವೆ." ಆಕೆ ಮೊದಲು ನೋಡಿದ್ದು ಬಂಗಾರದ ಕಂಕಣಗಳನ್ನು. ನಂತರ, ಆಕೆ ಮುತ್ತಿನ ಕಂಠಹಾರ, ವೆನಿಸ್‌ಪಟ್ಟಣದಲ್ಲಿ ತಯಾರಿಸಿದ ಶಿಲುಬೆ, ಬಂಗಾರ, ಮುತ್ತುವಜ್ರಗಳ ಸೊಗಸಾದ ಒಡವೆಗಳನ್ನು ನೋಡಿದಳು. ಅವುಗಳನ್ನು ಧರಿಸುವುದೇ ಬೇಡವೇ ಎಂಬುದನ್ನು ನಿರ್ಧರಿಸುವುದೇ ಕಷ್ಟವಾಯಿತು, ಆಕೆಗೆ.

"ಬೇರೇನೂ ಇಲ್ಲವೆ?" ಎಂದು ಕೇಳಿದಳು.

"ಓಹೋ, ಇವೆ. ಅವುಗಳನ್ನು ನೋಡು. ಯಾವುದು ನಿನಗೆ ಮೆಚ್ಚುಗೆಯಾಗಬಹುದೋ ನನಗೆ ತಿಳಿಯದು."

ಇದ್ದಕ್ಕಿದ್ದಂತೆ ಆಕೆ ನುಣುಪಾದ ಕಪ್ಪು ಬಟ್ಟೆ ಹೊದಿಸಿದ್ದ ಪೆಟ್ಟಿಗೆಯೊಂದನ್ನು ತೆರೆದು, ಸೊಗಸಾದ ವಜ್ರಗಳ ಸರಮಾಲೆಯೊಂದನ್ನು ತೋರಿಸಿದಳು. ಅದನ್ನು ಧರಿಸುವ ಉತ್ಕಟೇಚ್ಛೆಯಿಂದ ಆಕೆಯ ಎದೆ ತೀವ್ರವಾಗಿ ಬಡಿದುಕೊಳ್ಳಲಾರಂಭಿಸಿತು. ಆಕೆ ತನ್ನ ನಡುಗುತ್ತಿದ್ದ ಕೈಗಳಲ್ಲಿ ಅವುಗಳನ್ನು ತೆಗೆದುಕೊಂಡು, ತನ್ನ ಸಾದಾ, ಉದ್ದನೆಯ ಕತ್ತಿನ ಮೇಲು ಲಂಗದ ಮೇಲಿಟ್ಟುಕೊಂಡು ನೋಡಿದಳು. ಆ ಆಭರಣದೊಂದಿಗೆ ತನ್ನನ್ನು ತಾನೇ ಕಂಡು ಕೊಂಡಾಡಿ ಆನಂದ ಪರವಶಳಾದಳು. ಎಲ್ಲಿ ಆಕೆ ಆ ಒಡವೆಯನ್ನು ಕೊಡಲು ನಿರಾಕರಿಸಿ ಬಿಡುವಳೋ ಎಂಬ ಯಾತನೆಯ ಭಯದಿಂದಲೇ, ಹಿಂದೆ-ಮುಂದೆ ನೋಡುತ್ತ ಆಕೆ :

"ಅದೊಂದನ್ನು ಮಾತ್ರ ಎರವಲಾಗಿ ಕೊಡುವೆಯಾ?" ಎಂದು ಕೇಳಿದಳು.

"ಏಕೆ, ನಿನಗೆ ಒಪ್ಪಿಗೆಯಾಗುವುದಾದರೆ ಖಂಡಿತವಾಗಿ ಕೊಡುತ್ತೇನೆ"

ಆಕೆ ತನ್ನ ಗೆಳತಿಯ ಕತ್ತಿನ ಮೇಲೆ ಬಿದ್ದು ಆಕೆಯನ್ನು, ಬಿರುಗಾಳಿಯಂತೆ, ರಭಸದಿಂದ ತಬ್ಬಿಕೊಂಡು, ತನ್ನ ನಿಧಿಯೊಂದಿಗೆ ಅವಸರವಸರವಾಗಿ ಹೊರಟೇ ಬಿಟ್ಟಳು.

ನೃತ್ಯದ ದಿನ ಬಂದಿತು. ಶ್ರೀಮತಿ ಲಾಯ್ಸೆಲ್ ತುಂಬ ಯಶಸ್ವಿಯಾದಳು. ನೆರೆದಿದ್ದ ಎಲ್ಲ ಸುಂದರ ರಮಣಿಯರ ಪೈಕಿ ಆಕೆಯೇ ಅತ್ಯಂತ ಸುಂದರಿ. ಆಕೆಯ ಬೆಡಗು, ನಯ-ನಾಜೂಕು, ಸಂತಸದ ನಗೆಯೋ! ಆಕೆ ಅಂದು ಅಲ್ಲಿ ಉಪಸ್ಥಿತರಿದ್ದ ಕೆಲವು ಅತ್ಯಂತ ಗಣ್ಯವ್ಯಕ್ತಿಗಳ ಗಮನವನ್ನು ಸೆಳೆದಳು. ಎಲ್ಲ ಕಡೆಗಳಿಂದಲೂ ಕೇಳಿ ಬರುತ್ತಿತ್ತು :

"ಯಾರು ಆಕೆ?"

ಸಚಿವ ಸಂಪುಟದ ರಾಯಭಾರ ಪರಿವಾರದವರೆಲ್ಲರೂ ಆಕೆಯ ನೃತ್ಯ ಕಾರ್ಯಕ್ರಮದ ಪತ್ರಿಕೆಯನ್ನು ತವಕದಿಂದ ಕೇಳುತ್ತಿದ್ದರು. ಮಂತ್ರಿಗಳು ಕೂಡ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಸಂತೋಷದಿಂದ ನರ್ತಿಸಿದ ಆಕೆಯ ಮನಸ್ಸಿನಲ್ಲಿದ್ದುದು - ತನ್ನ ಚೆಲುವಿನ ವಿಜಯ ಮತ್ತು ತನ್ನ ಯಶಸ್ಸಿನ ಕೀರ್ತಿ ಮಾತ್ರ. ಎಲ್ಲರ ಮೆಚ್ಚುಗೆಯ ಅಮಲೇರಿ, ಆಕೆ ಸುಖದ ಮೋಡದಲ್ಲಿ ತೇಲುತ್ತಿರುವಂತೆ ಕಾಣುತ್ತಿದ್ದಳು. ಆಕೆಯ ಸಂಪೂರ್ಣ ವಿಜಯ, ಆಕೆಯ ಬೆಡಗು-ಬಿನ್ನಾಣಗಳಿಗೆ ದೊರೆತ ಪ್ರಶಂಸೆ ಆಕೆಯ ಸುಖವನ್ನು ಮತ್ತಷ್ಟು ಹೆಚ್ಚಿಸಿದುವು. ತನ್ನ ಬೆಡಗು-ಬಿನ್ನಾಣಗಳಿಗೆ ದೊರೆತ ಪ್ರಶಸ್ತಿ ಸ್ತ್ರೀ ಹೃದಯಕ್ಕೆ ಬಲು ಸವಿಯಷ್ಟೆ. ಬೆಳಗಿನ ಜಾವ ನಾಲ್ಕು ಗಂಟೆಯ ಹೊತ್ತಿಗೆ ಅಲ್ಲಿಂದ ಹೊರಟಳು. ಮಧ್ಯರಾತ್ರಿಯ ನಂತರ ಆಕೆಯ ಗಂಡ ಸಣ್ಣ ಕೋಣೆಯೊಂದರಲ್ಲಿ ಮಲಗಿದ್ದ. ಆತನಂತೆಯೇ ತಮ್ಮ ಪತ್ನಿಯರಿಗಾಗಿ ಕಾದಿದ್ದ ಇಬ್ಬರು-ಮೂವರು ಗೃಹಸ್ಥರನ್ನು ಬಿಟ್ಟರೆ ಆ ಕೋಣೆಯಲ್ಲಿ ಬೇರಾರೂ ಇರಲಿಲ್ಲ.

ಆಕೆ ಮನೆಯಿಂದ ತಂದಿದ್ದ ಸಾಧಾರಣ ಮೇಲಂಗಿಯನ್ನು ಆತ ಆಕೆಯ ಭುಜಗಳ ಮೇಲೆ ಹಾಕಿದ. ಅದರ ಕ್ಷುದ್ರತೆ ನೃತ್ಯದ ಉಡುಪಿನ ಸೊಗಸನ್ನು ಮೂದಲಿಸುವಂತಿತ್ತು. ಅದರ ಅಸೌಚಿತ್ಯವನ್ನು ಮನಗಂಡು ಆಕೆ ಸರಸರನೆ ನಡೆದಳು-ಸಮಾರಂಭಕ್ಕೆ ತಕ್ಕುದಾದ ದುಬಾರಿ ತುಪ್ಪಳದ ಮೇಲಂಗಿಗಳನ್ನು ಧರಿಸಿದವರ ಕಣ್ಣು ತಪ್ಪಿಸಲೆಂದು.

ಆಕೆಯ ಗಂಡ "ತಾಳು. ನಿನಗೆ ಶೀತವಾಗುತ್ತದೆ. ಒಂದು ಗಾಡಿಯನ್ನು ಕರೆಯುತ್ತೇನೆ" ಎಂದ.

ಆದರೆ, ಆಕೆ ಆತನ ಮಾತನ್ನು ಕಿವಿಗೆ ಹಾಕಿಕೊಳ್ಳದೆ ಮೆಟ್ಟಿಲುಗಳಿಂದ ಸರಸರನೆ ಕೆಳಗಿಳಿದಳು. ಅವರು ರಸ್ತೆಗೆ ಬಂದಾಗ, ಅಲ್ಲಿ ಒಂದು ಗಾಡಿಯೂ ಕಾಣಿಸಲಿಲ್ಲ. ಗಾಡಿಯಂತೂ ಬೇಕೇ ಬೇಕು. ರಸ್ತೆಯಲ್ಲಿ ಹೋಗುತ್ತಿದ್ದ ಗಾಡಿಗಳ ಚಾಲಕರನ್ನು ಕರೆದರೆ, ಒಬ್ಬರೂ ಗಾಡಿಯನ್ನು ನಿಲ್ಲಿಸಲಿಲ್ಲ. ಕೊರೆಯುವ ಚಳಿಯಲ್ಲಿ ಅವರು ಸೀನ್ (Seine) ನತ್ತ ನಡೆದರು. ಕಡೆಗೆ ಬಂದರುಕಟ್ಟೆಯ ಬಳಿ ನಿಶಾಸಂಚಾರಿಯಾದ ನಾಲ್ಕು ಚಕ್ರಗಳ ಮುಚ್ಚುಗಾಡಿಯೊಂದು ಸಿಕ್ಕಿತು. ಹಗಲಿನಲ್ಲಿ ತಮ್ಮ ಹೀನ ಸ್ಥಿತಿಯನ್ನು ಮರೆಮಾಚಿ ರಾತ್ರಿ ವೇಳೆ ಹಿಂಸ್ರ ಪಕ್ಷಿಗಳಂತೆ ಮಹಾನಗರದಲ್ಲಿ ಸುತ್ತಾಡುವ ಇಂತಹ ವಾಹನಗಳನ್ನು ಕತ್ತಲೆಯಾದ ಮೇಲೆ ಪ್ಯಾರಿಸ್‌ನಗರದಲ್ಲಿ ಮಾತ್ರ ಕಾಣಬಹುದು. ಅದು ಅವರನ್ನು ಮನೆ ಬಾಗಿಲಿಗೆ ತಂದುಬಿಟ್ಟಿತು. ಅವರು ನಿಧಾನವಾಗಿ, ವಿಷಣ್ಣವದನರಾಗಿ ತಮ್ಮ ಸಣ್ಣ ಕೋಣೆಗಳನ್ನು ಪ್ರವೇಶಿಸಿದರು. ಆಕೆಯ ಪಾಲಿಗೆ ಆ ಮಹಾರಾತ್ರಿ ಕಳೆದಿತ್ತು. ಆತನಾದರೋ ಬೆಳಿಗ್ಗೆ ಹತ್ತುಗಂಟೆಗೆ ಕಛೇರಿಯಲ್ಲಿರಬೇಕೆಂದು ನೆನಪಿಸಿಕೊಂಡ.

ತನ್ನ ಶೃಂಗಾರದ ಸೊಗಸನ್ನು ಮತ್ತೊಮ್ಮೆ ನೋಡಲೆಂದು, ಆಕೆ ಕನ್ನಡಿಯ ಮುಂದೆ ನಿಂತು ಮೇಲಂಗಿಯನ್ನು ಕಳಚಿದಳು. ಆದರೆ, ಆಕೆ ಹಠಾತ್ತನೆ ಕೂಗಿದಳು : "ವಜ್ರಗಳು ಕಳೆದುಹೋಗಿವೆ!"

ಅರನಿದ್ದೆಯ ಮಂಪರಿನಲ್ಲಿದ್ದ ಆಕೆಯ ಗಂಡ ಆಕೆಯ ಕೂಗಿನ ಶಬ್ದದಿಂದ ಎಚ್ಚೆತ್ತು ಕೇಳಿದ :

"ಏನು ವಿಷಯ?"

ಭಯಭೀತಳಾಗಿ ಆಕೆ ಅವನತ್ತ ತಿರುಗಿದಳು.

"ನಾನು-ನಾನು ಶ್ರೀಮತಿ ಫಾರೆಸ್ಟಿಯರ್‌ಳ ಕಂಠಹಾರವನ್ನು ಕಳೆದುಕೊಂಡಿದ್ದೇನೆ!"

ಆತ ಗಾಬರಿಗೊಂಡು ಎದ್ದ.

"ಏನು? ಅದು ಕಳೆದು ಹೋಗುವುದಾದರೂ ಹೇಗೆ? ಇಲ್ಲ, ಸಾಧ್ಯವಿಲ್ಲ." ಕೂಡಲೆ ಅವರಿಬ್ಬರೂ ಉಡುಪಿನ ಮಡಿಕೆಗಳಲ್ಲಿ, ಮೇಲಂಗಿಯಲ್ಲಿ, ಜೇಬುಗಳಲ್ಲಿ ಎಲ್ಲೆಲ್ಲಿಯೂ ಹುಡುಕಾಡಿದರು. ಎಲ್ಲೂ ಏನೂ ಸಿಗಲಿಲ್ಲ.

"ನೀನು ನರ್ತನವನ್ನು ಮುಗಿಸಿಕೊಂಡು ಬರುವಾಗ ಅದು ಇದ್ದಿತೆಂದು ನಿನಗೆ ಖಾತರಿ ಇದೆಯೇ?"

"ಹೌದು. ನಾನು ಇನ್ನೂ ಮಂತ್ರಿಯವರ ನಿವಾಸದ ಕೈಸಾಲೆಯಲ್ಲಿ ಇದ್ದಾಗಲೇ ಅದನ್ನು ಮುಟ್ಟಿ ನೋಡಿಕೊಂಡೆ."

"ಆದರೆ, ನೀನು ಅದನ್ನು ರಸ್ತೆಯಲ್ಲಿ ಕಳೆದುಕೊಂಡಿದ್ದರೆ ಅದು ಬೀಳುವ ಶಬ್ದ ನಮಗೆ ಕೇಳಿಸಬೇಕಿತ್ತು. ಅದು ಗಾಡಿಯಲ್ಲಿಯೇ ಇರಬೇಕು."

"ಹೌದು. ಅದು ಸಾಧ್ಯ. ಗಾಡಿಯ ಸಂಖ್ಯೆಯನ್ನು ಬರೆದುಕೊಂಡೆಯಾ?"

"ಇಲ್ಲ. ನೀನೂ ಅದನ್ನು ನೋಡಿದಂತಿಲ್ಲ."

"ಇಲ್ಲ"

ಇಬ್ಬರೂ ಭಯಭೀತರಾಗಿ ಒಬ್ಬರನ್ನೊಬ್ಬರು ನೋಡಿದರು. ಕಡೆಗೆ ಲಾಯ್ಸೆಲ್ ಬಟ್ಟೆ ಹಾಕಿಕೊಂಡ.

"ನಾವು ಕಾಲ್ನಡಿಗೆಯಲ್ಲಿ ನಡೆದು ಬಂದ ಇಡೀ ಜಾಗದಲ್ಲಿ ಹುಡುಕಾಡಿ ಅದು ಸಿಗುವುದೋ ಇಲ್ಲವೋ ನೋಡುತ್ತೇನೆ."

ಆತ ಹೊರಗೆ ನಡೆದ. ಆಕೆ ತನ್ನ ಥಳಥಳಿಸುವ ನೃತ್ಯದ ವೇಷ -ಭೂಷಣಗಳಲ್ಲಿ ಸ್ತಬ್ಧಳಾಗಿ ಕುಳಿತಳು. ಆಕೆಗೆ ನಿದ್ದೆ ಬೇಡವಾಯಿತು. ಯೋಚಿಸುವ ಸಾಮರ್ಥ್ಯವೂ ಇಲ್ಲದಂತಾಯಿತು. ತಮ್ಮ ಮೇಲೆ ಬಂದೆರಗಿದ್ದ ಗಂಡಾಂತರದ ಭೀತಿಯು ಎಲ್ಲವನ್ನೂ ನುಂಗಿಬಿಟ್ಟಿತು.

ಗಂಡ ಏಳು ಗಂಟೆಗೆ ಮನೆಗೆ ಬಂದ ಬರಿಗೈಯಲ್ಲಿ. ಆತ ಪೋಲೀಸ್ ಅಧಿಕಾರಿಗಳ ನಿವಾಸಕ್ಕೆ ಹೋಗಿ ಬಂದ. ವೃತ್ತ ಪತ್ರಿಕೆಗಳ ಕಾರ್ಯಾಲಯಗಳಿಗೆ ಭೇಟಿ ನೀಡಿ ಒಡವೆಯನ್ನು ತಂದುಕೊಟ್ಟವರಿಗೆ ಬಹುಮಾನವನ್ನು ಘೋಷಿಸಿದ. ಎಲ್ಲ ಸಣ್ಣ ಕುದುರೆಗಾಡಿ ಕಂಪನಿಗಳಿಗೆ, ಒಂದು ಮಾತಿನಲ್ಲಿ ಹೇಳುವುದಾದರೆ, ಒಡವೆ ಮರಳಿ ದೊರಕಬಹುದಾಗಿದ್ದ ಭರವಸೆಯ ಸರಳು ಕಾಣಿಸಬಹುದಾದ ಸ್ಥಳಗಳಿಗೆಲ್ಲ ಹೋಗಿ ಬಂದ.

ಆಕೆ ಇಡೀ ದಿನ ಕಾದು ಕುಳಿತಳು, ಭಯಾನಕ ಗಂಡಾಂತರದ ಭೀತಿಯಲ್ಲಿ. ಸಂಜೆ ಲಾಯ್ಸೆಲ್ ಮನೆಗೆ ಮರಳಿದ, ಕಂಗೆಟ್ಟು, ಸಪ್ಪೆ ಮೋರೆ ಹಾಕಿಕೊಂಡು. ಯಾವ ಸಮಾಚಾರವೂ ಇಲ್ಲ.

"ನೀನು ನಿನ್ನ ಗೆಳತಿಗೆ ಒಂದು ಪತ್ರವನ್ನು ಬರೆದು ಕಂಠಹಾರದ ಕೊಂಡಿ ಮುರಿದು ಹೋಗಿರುವುದರಿಂದ ಅದನ್ನು ರಿಪೇರಿ ಮಾಡಿಸುತ್ತಿರುವುದಾಗಿ ತಿಳಿಸು. ಇದರಿಂದ ನಮಗೆ ಹುಡುಕಾಡಲು ಸಮಯ ಸಿಗುತ್ತದೆ."

ವಾರಾಂತ್ಯದ ವೇಳೆಗೆ ಒಡವೆ ಮರಳಿ ದೊರಕುವ ಭರವಸೆ ಮಾಯವಾಯಿತು. ಈ ಚಿಂತೆ ಪರದಾಟದಿಂದ ಲಾಯ್ಸೆಲ್‌ಗೆ ಐದು ವರ್ಷ ವಯಸ್ಸು ಹೆಚ್ಚಿದಂತಾಯಿತು. ಆತ "ನಾವು ಕಳೆದು ಹೋದ ಒಡವೆಗೆ ಬದಲಾಗಿ ಬೇರೆ ಒಡವೆಯನ್ನು ಹಿಂದಿರುಗಿಸುವ ಪ್ರಯತ್ನ ಮಾಡಬೇಕು" ಎಂದ.

ಮಾರನೆಯ ದಿನ ಅವರು ಆಭರಣ ಪೆಟ್ಟಿಗೆಯೊಳಗೆ ಮುದ್ರಿಸಲಾಗಿದ್ದ ವಿಳಾಸದ ಆಭರಣ ವ್ಯಾಪಾರಿಯ ಅಂಗಡಿಗೆ ಹೋದರು. ಆತ ತನ್ನ ಪುಸ್ತಕಗಳನ್ನು ತೆರೆದು ನೋಡಿದ. " ಅಮ್ಮಾ, ನಾನು ಕಂಠಹಾರವನ್ನು ಮಾರಲಿಲ್ಲ. ಆಭರಣ ಪೆಟ್ಟಿಗೆಯನ್ನಷ್ಟೇ ಕೊಟ್ಟೆ" ಎಂದ.

ನಂತರ ಅವರು ಕಳೆದು ಹೋದ ಒಡವೆಗಳಿಗೆ ಸರಿಗಟ್ಟುವ ಒಡವೆಗಳಿಗಾಗಿ ತಲೆಕೆಡಿಸಿಕೊಂಡು, ಸರಾಫರ ಅಂಗಡಿಗಳನ್ನೆಲ್ಲ ಸುತ್ತಿದರು. ಇಬ್ಬರೂ ದುಃಖ- ಯಾತನೆಗಳಿಂದ ಬೆಂದು ಬಸವಳಿದರು. ಕಡೆಗೆ, ಪ್ಯಾಲೆಸ್ ರಾಯಲ್‌ನ ಸಣ್ಣ ಅಂಗಡಿಯೊಂದರಲ್ಲಿ ಕಳೆದು ಹೋದ ಒಡವೆಯಂತೆಯೇ ಇದ್ದ ಒಡವೆಯನ್ನು ಕಂಡರು. ಬೆಲೆ ಕೇಳುವಾಗ ಎದೆ ಬಡಿದುಕೊಳ್ಳುತ್ತಿತ್ತು.

ನಲವತ್ತು ಸಾವಿರ ಫ್ರಾಂಕ್‌ಗಳು. ಆದರೆ, ೩೬,೦೦ ಫ್ರಾಂಕ್‌ಗಳಿಗೆ ಅದು ಲಭ್ಯವಿತ್ತು.

ಮೂರು ದಿನಗಳ ಮಟ್ಟಿಗೆ ಅದನ್ನು ಬೇರೆಯವರಿಗೆ ಮಾರದಿರುವಂತೆ ಸರಾಫನನ್ನು ಕೇಳಿಕೊಂಡರು. ಆತ ಫೆಬ್ರುವರಿ ತಿಂಗಳ ಅಂತ್ಯದೊಳಗೆ ಕಳೆದು ಹೋಗಿದ್ದ ಒಡವೆ ಮರಳಿ ದೊರೆತ ಪಕ್ಷದಲ್ಲಿ ತನ್ನ ಒಡವೆಯನ್ನು ವಾಪಸ್ ಪಡೆದು, ೩೪೦೦೦ ಫ್ರಾಂಕ್‌ಗಳನ್ನು ಕೊಡುವುದಾಗಿ ಭರವಸೆಯಿತ್ತ.

ಲಾಯ್ಸೆಲ್‌ಗೆ ಪಿತ್ರಾರ್ಜಿತವಾಗಿ ೧೮,೦೦೦ ಫ್ರಾಂಕ್‌ಗಳು ಬಂದಿದ್ದುವು. ಉಳಿದ ಹಣವನ್ನು ಸಾಲವಾಗಿ ಪಡೆದ.

ಆತ ಇವರಿಂದ ಸಾವಿರ ಫ್ರಾಂಕ್ ಅವರಿಂದ ೧೦೦೦ ಫ್ರಾಂಕ್, ಇಲ್ಲಿ ಐದು ಲೂಯಿ, ಅಲ್ಲಿ ಐದು ಲೂಯಿ - ಹೀಗೆ ಸಿಕ್ಕಿಸಿಕ್ಕಿದಲ್ಲೆಲ್ಲ ಸಾಲ ಮಾಡಿದ. ಸಾಲದ ಮುಚ್ಚಳಿಕೆಗಳನ್ನು ಬರೆದು ಕೊಟ್ಟ, ಮನೆಹಾಳು ಕರಾರು ಪತ್ರಗಳನ್ನು ಸಹಿ ಮಾಡಿಕೊಟ್ಟ. ಆತ ತನ್ನ ಇಡೀ ಬದುಕನ್ನೇ

ಒತ್ತೆಯಿಟ್ಟ - ಸಿಕ್ಕ ಸಿಕ್ಕವರಲ್ಲೆಲ್ಲ ಸಹಿ ಮಾಡಿಕೊಟ್ಟ; ಭವಿಷ್ಯದ ಯಾತನೆಯಿಂದ, ತನ್ನನ್ನು ಸುತ್ತಿಬಳಸಿದ್ದ ಕರಾಳ ಸಂಕಟದಿಂದ, ಮುಂದೆ ಒದಗಿ ಬರಲಿದ್ದ ಎಲ್ಲ ದೈಹಿಕ ಕಷ್ಟ-ನಷ್ಟಗಳ, ಮಾನಸಿಕ ಯಾತನೆಗಳ ಪ್ರತೀಕ್ಷೆಯಿಂದ ಭಯಭೀತನಾಗಿ ತತ್ತರಿಸಿದ. ತನ್ನ ೩೬,೦೦೦ ಫ್ರಾಂಕ್‌ಗಳನ್ನು ಅಂಗಡಿಯವನ ಮೇಜಿನ ಮೇಲಿಟ್ಟು, ಕಂಠಹಾರವನ್ನು ಖರೀದಿಸಿದ.

ಶ್ರೀಮತಿ ಲಾಯ್ಸೆಲ್ ಶ್ರೀಮತಿ ಫಾರೆಸ್ಟಿಯರ್‌ಳಿಗೆ ಕಂಠಹಾರವನ್ನು ಹಿಂದಿರುಗಿಸಿದಾಗ, ಆಕೆ ನಿರುತ್ಸಾಹದ ದನಿಯಲ್ಲಿ "ನೀನು ಅದನ್ನು ಇನ್ನೂ ಮುಂಚಿತವಾಗಿಯೇ ಹಿಂದುರುಗಿಸಿದ್ದಿದ್ದರೆ ನಾನು ಹಾಕಿಕೊಳ್ಳಲು ಬರುತ್ತಿತ್ತು" ಎಂದಳು.

ಆಕೆ ಒಡವೆ ಪೆಟ್ಟಿಗೆಯನ್ನು ತೆರೆದು ನೋಡಲಿಲ್ಲ. ಶ್ರೀಮತಿ ಲಾಯ್ಸೆಲ್‌ಳಿಗೆ ಆಕೆ ಎಲ್ಲಿ ತೆರೆದು ನೋಡಿ ಬಿಡುವಳೋ ಎಂದು ಭಯವಾಗಿತ್ತು. ತನ್ನ ಒಡವೆ ಬದಲಿಯಾಗಿರುವುದನ್ನು ಗಮನಿಸಿದರೆ ಆಕೆ ಏನೆಂದುಕೊಳ್ಳುತ್ತಿದ್ದಳೋ? ತನ್ನನ್ನು ಕಳ್ಳಿ ಎಂದು ಪರಿಗಣಿಸುತ್ತಿರಲಿಲ್ಲವೇ?

ಅಲ್ಲಿಂದ ಮುಂದೆ ಶ್ರೀಮತಿ ಲಾಯ್ಸೆಲ್‌ಳಿಗೆ ಕಡು ಬಡವರ ಪಾಲಿಗೆ ಬದುಕು ತನ್ನ ಎಲ್ಲ ಮಜಲುಗಳಲ್ಲಿ ಹೇಗಿರುತ್ತದೆಯೆಂಬುದರ ಪರಿಚಯವಾಯಿತು. ಆಕೆ ತನ್ನ ಪಾತ್ರವನ್ನು ಧೀರೋದಾತ್ತಳಾಗಿ ನಿರ್ವಹಿಸಿದಳು. ಈ ಭಯಾನಕ ಸಾಲವನ್ನು ತೀರಿಸಬೇಕು. ಆಕೆ ತನ್ನ ಪಾಲಿನ ಕಷ್ಟಗಳನ್ನು ಧೈರ್ಯದಿಂದ ಸಹಿಸಿಕೊಂಡಳು. ಅವರು ಮನೆಯ ಏಕೈಕ ಕೆಲಸದಾಕೆಯನ್ನು ವಜಾ ಮಾಡಿದರು. ಮನೆ ಬದಲಾಯಿಸಿ ಮನೆಯ ಮಾಳಿಗೆಯ ಬಳಿ ಇದ್ದ ಸಣ್ಣ ಕೊಠಡಿಗಳನ್ನು ಬಾಡಿಗೆಗೆ ತೆಗೆದುಕೊಂಡರು.

ಆಕೆಗೆ ಈಗ ತಿಳಿಯಿತು-ಗೃಹಕೃತ್ಯದ ಕರ್ತವ್ಯಗಳೆಂದರೇನು, ಅಡುಗೆ ಮನೆಯ ಕೆಲಸ ಎಷ್ಟು ಭಾರ, ಕಠಿಣ ಎಂಬುದು. ಆಕೆಯ ಮುದ್ದಾದ ಕೈಗಳಿಗೆ ಹಿಂದಿನ ದಿನಗಳಲ್ಲಿ ದೊರಕುತ್ತಿದ್ದ ಲಕ್ಷ್ಯ, ಗಮನ ಬೇಗನೆ ತಪ್ಪಿಹೋಯಿತು. ಆಕೆ ಕೊಳಕು ಬಟ್ಟೆಗಳನ್ನೆಲ್ಲ ತಾನೆ ಒಗೆದು ತನ್ನ ಕೊಠಡಿಯಲ್ಲಿ ಒಣಹಾಕುತ್ತಿದ್ದಳು. ಪ್ರತಿದಿನ ಬೆಳಗ್ಗೆ ಅಡುಗೆ ಮನೆಯ ಕಸ- ಮುಸರೆಯೊಂದಿಗೆ ತಾನೇ ಬೀದಿಗೆ ಹೋಗುತ್ತಿದ್ದಳು. ಮಹಡಿಯ ತುದಿಯಲ್ಲಿದ್ದ ತನ್ನ ಮನೆಗೆ ತಾನೇ ನೀರು ಹೊರುತ್ತಿದ್ದಳು - ಆಗಾಗ ಮೆಟ್ಟಿಲುಗಳ ಸಾಲುಗಳ ಮೇಲೆ ನಿಂತು ವಿರಮಿಸಿಕೊಳ್ಳುತ್ತ. ಪ್ರತಿದಿನವೂ ಸಾಮಾನ್ಯ ವರ್ಗದ ಮಹಿಳೆಯ ಉಡುಪನ್ನು ಧರಿಸಿ, ಆಕೆ ಹೆಗಲಿಗೆ ಬುಟ್ಟಿಯನ್ನೇರಿಸಿಕೊಂಡು ದಿನಸಿ ಅಂಗಡಿಗೆ, ಹಣ್ಣಿನಂಗಡಿಗೆ, ಮಾಂಸದಂಗಡಿಗೆ ಹೋಗುತ್ತಿದ್ದಳು. ಆಕೆ ಅಂಗಡಿಯವರೊಂದಿಗೆ ಚೌಕಾಶಿ ವ್ಯಾಪಾರ ನಡೆಸಿ, ತನ್ನ ಬಳಿ ಇದ್ದ ಅಲ್ಪ- ಸ್ವಲ್ಪ ಹಣದ ಒಂದೊಂದು ಬಿಡಿ ಸೆಂಟ್ ಅನ್ನು ಕೂಡ ಉಳಿಸಿಕೊಂಡು ಬರುತ್ತಿದ್ದಳು.

ಪ್ರತಿ ತಿಂಗಳೂ ಅವರು ಕೆಲವು ಸಾಲ ಪತ್ರಗಳ ಬಾಬತ್ತು ಹಣ ಪಾವತಿ ಮಾಡಬೇಕಾಗಿತ್ತು. ಮತ್ತೆ ಕೆಲವನ್ನು ನವೀಕರಿಸಲಾಗುತ್ತಿತ್ತು. ಕಾಲಾವಕಾಶ ಪಡೆಯಲು ಆಕೆಯ ಗಂಡನಾದರೋ ಸಂಜೆಯ ವೇಳೆ ಅಂಗಡಿಗಳಲ್ಲಿ ಲೆಕ್ಕ ಬರೆಯುತ್ತಿದ್ದ. ಎಷ್ಟೋ ವೇಳೆ ಆತ ಲಿಪಿಕಾರನಾಗಿ ಪುಟವೊಂದಕ್ಕೆ ಐದು ಸೆಂಟ್‌ನಂತೆ ಹಣ ಸಂಪಾದನೆ ಮಾಡಲು ರಾತ್ರಿಯೆಲ್ಲ ದುಡಿಯುತ್ತಿದ್ದುದೂ ಉಂಟು.

ಹತ್ತು ವರ್ಷಗಳ ಕಾಲ ಅವರು ಈ ಸಂಕಷ್ಟದ ಬಾಳ್ವೆಯನ್ನು ಸಹಿಸಿದರು.

ಈ ಅವಧಿಯ ಅಂತ್ಯದ ವೇಳೆಗೆ, ಅವರು ಬಡ್ಡಿ ವ್ಯಾಪಾರಿಗಳ ಎಲ್ಲ ಸಾಲಗಳನ್ನೂ ಚಕ್ರಬಡ್ಡಿ ಸಹಿತ ತೀರಿಸಿದರು.

ಶ್ರೀಮತಿ ಲಾಯ್ಸೆಲ್ ಈಗ ಮುದುಕಿಯಂತೆ ಕಾಣಿಸುತ್ತಿದ್ದಳು. ಆಕೆ ಗ್ರಾಮೀಣ ಮಹಿಳೆಯರಂತೆ, ಬಲಿಷ್ಠಳಾಗಿ ಗಟ್ಟಿ ಮುಟ್ಟಾಗಿದ್ದಳು. ಆಕೆಯ ಕೆದರಿದ ಕೂದಲು, ಗಿಡ್ಡ ಪರಕಾರ(skirt), ಕೆಂಪಾದ ಕೈಗಳೋ! ಮನೆ ಬಾಗಿಲ ಬಳಿ ಗೊಡ್ಡು ಹರಟೆಯಲ್ಲಿ, ಪರಕಥಾಕಾಲಕ್ಷೇಪದಲ್ಲಿ ಕಾಲ ಕಳೆಯುತ್ತಿದ್ದ ನೆರೆಹೊರೆಯ ಉತ್ಕಂಠೆಯರ - ಎತ್ತರದ ಧ್ವನಿಯಲ್ಲಿ ಮಾತನಾಡುವ ಮಹಿಳೆಯರ ಪೈಕಿ ಶ್ರೀಮತಿ ಲಾಯ್ಸೆಲ್ ಈಗ ಅಗ್ರಗಣ್ಯಳು.

ಆದರೆ, ಕೆಲವೊಮ್ಮೆ, ತನ್ನ ಗಂಡ ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದಾಗ, ಆಕೆ ಕಿಟಕಿಯ ಬಳಿ ಕುಳಿತು, ಗತ ಕಾಲದ ಆ ಸಂಜೆ, ಆ ನೃತ್ಯ, ಅಂದು ತಾನೆಷ್ಟು ಸುಂದರಿಯಾಗಿದ್ದೆ, ತನ್ನನ್ನು ಅದೆಷ್ಟು ಕೊಂಡಾಡಲಾಯಿತು ಎಂದೆಲ್ಲ ಯೋಚಿಸುತ್ತಿದ್ದುದುಂಟು.

ಆಕೆ ಕಂಠಹಾರವನ್ನು ಕಳೆದುಕೊಳ್ಳದಿದ್ದರೆ ಏನಾಗ ಬಹುದಿತ್ತು? ಬಲ್ಲವರಾರು ? ನಿಜಕ್ಕೂ, ಜೀವನ ವಿಚಿತ್ರ, ಚಂಚಲ - ಅನಿರೀಕ್ಷಿತ ಘಟನೆಗಳಿಂದ ಕೂಡಿದ್ದು . ಎಷ್ಟು ಸ್ವಲ್ಪದಿಂದಲೇ ನಾವು ಉಳಿಯಬಹುದು. ಇಲ್ಲವೆ, ನಾಶವಾಗಬಹುದು.

ಒಂದು ಭಾನುವಾರ - ಆಕೆ ಛಾಂಪ್ಸ್ ಎಲಿಸಿಯಲ್ಲಿ ನಡೆದುಕೊಂಡು ಹೋಗುತ್ತಿದ್ದಳು, ವಾರವೆಲ್ಲ ಕೆಲಸ ಮಾಡಿ ಸಾಕಾಗಿ ಕಿಂಚಿತ್ ಮನರಂಜನೆ ಪಡೆಯಲೆಂದು. ಎದುರಿಗೆ ಮಹಿಳೆಯೊಬ್ಬಳು ಪುಟ್ಟ ಮಗುವಿನೊಂದಿಗೆ ಬರುತ್ತಿದ್ದುದನ್ನು ಹಠಾತ್ತನೆ ಕಂಡಳು. ಆಕೆ ಶ್ರೀಮತಿ ಫಾರೆಸ್ಟಿಯರ್. ಆಕೆ ಇನ್ನೂ ಚಿಕ್ಕ ವಯಸ್ಸಿನವಳು, ಚೆಲುವೆ, ಮನೋಹರಿ. ಶ್ರೀಮತಿ ಲಾಯ್ಸೆಲ್ ತಟ್ಟನೆ ನಿಂತಳು, ಮುಂದೆ ಚಲಿಸಲಾಗದೆ. ಆಕೆಯೊಂದಿಗೆ ಮಾತನಾಡಬೇಕೆ? ಮಾತನಾಡಬೇಕು, ಖಂಡಿತ ಮಾತನಾಡಬೇಕು. ಕಂಠಹಾರದ ಸಾಲವನ್ನೆಲ್ಲ ತೀರಿಸಿಯಾಗಿದ್ದುದರಿಂದ, ಆಕೆಗೆ ಎಲ್ಲವನ್ನೂ ಹೇಳಿ ಬಿಡುತ್ತೇನೆ. ಏಕೆ ಹೇಳಬಾರದು ? ಆಕೆಯ ಬಳಿ ನಡೆದು 'ನಮಸ್ತೆ' ಎಂದಳು.

ಶ್ರೀಮತಿ ಫಾರೆಸ್ಟಿಯರ್ ಆಕೆಯ ಗುರುತು ಹಿಡಿಯಲಾಗದೆ, ಸಾಮಾನ್ಯ ವರ್ಗಕ್ಕೆ ಸೇರಿದ ಮಹಿಳೆಯೊಬ್ಬಳು ತನ್ನನ್ನು ಅಷ್ಟು ಸಲಿಗೆಯಿಂದ ಮಾತನಾಡಿಸಿದ್ದಕ್ಕಾಗಿ ಅಚ್ಚರಿಗೊಂಡಳು.

"ಆದರೆ, ಅಮ್ಮ ನೀವು ನನ್ನನ್ನು ಬೇರೆ ಯಾರೆಂದೋ ತಪ್ಪಾಗಿ ಭಾವಿಸಿರುವಂತಿದೆ"

"ಇಲ್ಲ, ನಾನು ಮತಿಲ್ಡೆ ಲಾಯ್ಸೆಲ್"

"ಓಹೋ! ನನ್ನ ಬಡ ಮತಿಲ್ಡೆ, ಎಷ್ಟೊಂದು ಬದಲಾಗಿದ್ದೀಯೆ?"

"ಹೌದು, ಕಳೆದ ಬಾರಿ ನಾನು ನಿನ್ನನ್ನು ಕಂಡಾಗಿನಿಂದ ಬಹಳ ಕಷ್ಟ-ನಷ್ಟಗಳನ್ನು ಅನುಭವಿಸಿದ್ದೇನೆ - ಎಲ್ಲ ನಿನಗಾಗಿ "

"ನನಗಾಗಿ! ಅದು ಹೇಗೆ?"

"ಮಂತ್ರಿಯ ನಿವಾಸದ ನೃತ್ಯ ಕಾರ್ಯಕ್ರಮಕ್ಕೆ ಹಾಕಿಕೊಂಡು ಹೋಗಲು ನೀನು ನನಗೆ ವಜ್ರದ ಕಂಠಹಾರವನ್ನು ಎರವಲಾಗಿ ಕೊಟ್ಟಿದ್ದನ್ನು ನೆನಪಿದೆಯೇ?"

"ಹೌದು, ಏನಾಯಿತು.?"

"ಸರಿ, ನಾನು ಅದನ್ನು ಕಳೆದುಕೊಂಡೆ"

"ಕಳೆದುಕೊಂಡೆ! ಅದು ಹೇಗೆ ? ನೀನು ಅದನ್ನು ನನಗೆ ಹಿಂದಿರುಗಿಸಿದೆಯಲ್ಲ!"

"ನಾನು ನಿನಗೆ ಅಂಥದೇ ಒಂದು ಕಂಠಹಾರವನ್ನು ಹಿಂದಿರುಗಿಸಿದೆ. ಕಳೆದ ಹತ್ತು ವರ್ಷಗಳಿಂದ ಅದರ ಬೆಲೆ ಬಾಬತ್ತು ಹಣವನ್ನು ತೀರಿಸುತ್ತಿದ್ದೇವೆ. ನಿನಗೆ ತಿಳಿದಿರುವಂತೆ, ಏನೂ ಇಲ್ಲದ ನಮಗೆ ಅಷ್ಟೊಂದು ಹಣವನ್ನು ತರೆವುದು ಸುಲಭವಾಗಿರಲಿಲ್ಲ. ಆದರೆ, ಅದೆಲ್ಲ ತೀರಿತು. ಈಗ ನಾನು ಸುಖವಾಗಿದ್ದೇನೆ."

" ನನ್ನ ಕಂಠಹಾರದ ಬದಲಾಗಿ ವಜ್ರ ಖಚಿತ ಕಂಠಹಾರವೊಂದನ್ನು ನೀನು ಖರೀದಿಸಿದೆ ಎಂದು ತಾನೇ ನೀನು ಹೇಳುತ್ತಿರುವುದು?" ಎಂದಳು ಶ್ರೀಮತಿ ಫಾರೆಸ್ಟಿಯರ್.

" ಹೌದು, ನಿನಗೆ ಗೊತ್ತಾಗಲೇ ಇಲ್ಲ ಅಲ್ಲವೇ ! ಅವು ಒಂದನ್ನೊಂದು ಅಷ್ಟೊಂದು ಹೋಲುತ್ತಿದ್ದುವು" ಎಂದು ಆಕೆ ಹೆಮ್ಮೆಯಿಂದ ನಕ್ಕಳು.

ಶ್ರೀಮತಿ ಫಾರೆಸ್ಟಿಯರಳ ಹೃದಯ ಕರಗಿತು. ಆಕೆಯ ಬಡ, ಒರಟು ಕೈಗಳನ್ನು ತನ್ನ ಕೈಗಳಲ್ಲಿ ಹಿಡಿದುಕೊಂಡು, ಆಕೆಯನ್ನು ತನ್ನತ್ತ ಮೃದುವಾಗಿ ಸೆಳೆದುಕೊಂಡು, ಕಂಬನಿ ತುಂಬಿದ ಗದ್ಗದ ಧ್ವನಿಯಲ್ಲಿ ಎಂದಳು:

"ಓ, ಬಡಪಾಯಿ, ಮತಿಲ್ಡೆ! ಆದರೆ, ನನ್ನವು ನಕಲಿ ವಜ್ರಗಳು. ಹೆಚ್ಚೆಂದರೆ, ಅವು ೫೦೦ ಫ್ರಾಂಕ್‌ಗಳಿಗಿಂತ ಹೆಚ್ಚು ಬೆಲೆ ಬಾಳುತ್ತಿರಲಿಲ್ಲ."

□

ಪಿ. ಶ್ರೀನಿವಾಸ, ನಂ. ೨೧೨, ೨ನೇ ಕ್ರಾಸ್, ೧ನೇ ಜಿ ಮುಖ್ಯರಸ್ತೆ
ಜಕ್ಕಸಂದ್ರ ಬಡಾವಣೆ, ೧ನೇ ಬ್ಲಾಕ್, ೧ನೇ ಮೇನ್
ಕೋರಮಂಗಲ, ಬೆಂಗಳೂರು -೫೬೦ ೦೩೪

# ಗುಲ್ಜಾರರ ನಾಲ್ಕು ಕವಿತೆಗಳು

ಅನು: ಎಂ. ಡಿ. ಒಕ್ಕುಂದ

## ಕಾಲಕೋಶ

ಅನಂತ ಕಾಲದಿಂದ ನಾನು
ಈ ನೆಲದ ಅವಶೇಷಗಳಗುಂಟ ಅಲೆಯುತ್ತಿರುವೆ

ರಾತ್ರಿಗಳೆಂಬ ಮುರುಕು ಗೋರಿಗಳ ಮೇಲಿನ
ಕೊಳಕು ಚರಮ ವಾಕ್ಯಗಳು ಅಳಿಸಿ ಹೋಗಿವೆ
ಟಿಸಿಲು ಟಿಸಿಲಾಗಿ ಒಡೆದ ಹಗಲುಗಳು
ವಕ್ರ ರೇಖೆಗಳಾಗಿ ಬಯಲಲ್ಲಿ ಬಿದ್ದಿವೆ
ದಿಗಂತದ ತಣ್ಣನೆಯ ದಹನ
ದಿಂದ ಹೊಗೆ ಎದ್ದಿದೆ
ಅಲ್ಲಿ ಇಲ್ಲಿ ಎಲ್ಲೆಲ್ಲೂ
ಕಾಲನ ಶಿರಚ್ಛೇದನವಾಗಿದೆ
ಶತಮಾನಗಳು ಧ್ವಂಸವಾಗಿದೆ.

ನಿಷ್ಕಲಂಕಿತ ರಕ್ತರಂಜಿತ ಅಂಗೈ ತುಂಬ
ಉಗುರುಗಳು ತೂತು ಕೊರೆದಿವೆ
ರಕ್ತ ಹನಿಸುತ್ತಿದೆ

ಪವಿತ್ರ ಆತ್ಮಗಳನ್ನು ಹೊತ್ತ ದೇಹಗಳು
ಸರ್ವನಾಶವಾಗಿವೆ
ಕೈಗಳಿಂದ ಮದರಂಗಿ ಸೋರಿ ಹೋಗಿದೆ
ಜ್ವಾಲೆಗಳು ಕಿಲುಬುಗಟ್ಟಿವೆ
ದೀಪಗಳು ನಂದಿಹೋಗಿವೆ
ಖಾಲಿ ಮುಖಗಳ ಖಾಲಿ ಪುಟಗಳು ತೆರೆದಿವೆ
ಕಣ್ಣ ಅಕ್ಷರಗಳು ಅಳಿಸಿ ಹೋಗಿವೆ

ಆದರೆ ಈ ಒಂದು ಮಂಜುಹನಿ
ಅಜರಾಮರವಾಗಿದೆ
ಅದರ ಕಣ್ಣುಗಳಲ್ಲಿ
ಭರವಸೆ ಜೀವಂತವಾಗಿದೆ
ಅದು ಕಂಪಿಸುತ್ತಿದೆ
ಶೋಧಿಸುತ್ತಿದೆ
ಕಾಯುತ್ತಿದೆ
ಬದುಕಿನ ಅರ್ಥಮಾತ್ರ
ಅದರುತ್ತಿದೆ
ಜಾರುತ್ತಿದೆ
ಮತ್ತು
ನಾಶವಾಗುತ್ತಿದೆ

ಅನಂತ ಕಾಲದಿಂದ ನಾನು
ಈ ನೆಲದ ಅವಶೇಷಗಳಗುಂಟ ಅಲೆಯುತ್ತಿರುವೆ

## ರಕ್ತದ ಸ್ಪರ್ಶ

ಕೊಂಚವಾದರು ಬೆನ್ನು ಬತ್ತಲಾಗಿದೆಯಾ ?
ಬಟ್ಟೆಗಳು ಒಂದಿಷ್ಟು ಚಿಂದಿಯಾಗಿವೆಯಾ ?
ತುಟಿಗಳು ತೃಷೆಯಿಂದ ಒಣಗಿ ಹೋಗಿವೆಯಾ ?
ಹಸಿವು ಹೊಟ್ಟೆಯಲ್ಲಿ ಗುಣುಗುಣಿಸುತ್ತಿದೆಯಾ ?

ತುಟಿಯ ಒಣ ತೊಗಟೆಯನ್ನು ಸುಲಿದು
ನೆತ್ತರಿನ ಕಲೆಯನ್ನು ಹಾಗೇ ಬಿಟ್ಟಿರುವೆಯಾ ?
ಎಲ್ಲಕ್ಕಿಂತ ಮುಖ್ಯವಾಗಿ
ರಕ್ತದ ಸ್ಪರ್ಶವಾಗಿದೆಯಾ ?

ಹಾಗಾದರಿನ್ನು ಚಿಂತೆ ಇಲ್ಲ
ಈ ವರ್ಣಚಿತ್ರ ದುಬಾರಿ ಬೆಲೆಗೆ
ಮಾರಾಟವಾಗುವುದು ಖಾತ್ರಿ

**ಶೋಕತಪ್ತ ರಾತ್ರಿ**

ಈ ಮೌನ
ಅಳುವಿಲ್ಲದೆ
ನಗುವಿಲ್ಲದೆ
ನನ್ನಿಂದ ದೂರ ಸರಿಯಲು
ತುದಿಗಾಲ ಮೇಲೆ ನಿಂತಿದೆ.

ನಿಲಾಕಾಶದ ಆಚ್ಛಾದನ
ದೂರದೂರದಲ್ಲಿದೆ
ಚಂದ್ರ
ಮೌನದ ಧೂಳನ್ನು ಕದಡುತ್ತಿದ್ದಾನೆ

ಒಮ್ಮೆ ಒಂದು ಬಾರಿಯಾದರೂ
ನೀನು ಎಚ್ಚರಾಗು
ಈ ವಿದಾಯದ ರಾತ್ರಿ
ಏನೇನು ನಡೆಯುತ್ತದೆಯೆಂದು ನೋಡಲು

ಒಮ್ಮೆ ಒಂದು ಬಾರಿಯಾದರೂ
ನೀನು ಎಚ್ಚರಾಗು
ಈ ಗೋಳಾಟದ ರಾತ್ರಿ
ಏನೆಲ್ಲಾ ಆಗಿ ಹೋಗುತ್ತದೆಯೆಂದು ಕಾಣಲು

**ಶಾಂತ ಸಾವು**

ಕೆಲವರು ಎಷ್ಟೊಂದು ನಿಶ್ಶಬ್ದವಾಗಿ ಸಾಯುತ್ತಾರೆ ಇಲ್ಲಿ ?

ತಮ್ಮದೆ ಲಡ್ಡಾದ ದೇಹದ
ತಣ್ಣನೆಯ ಗೋರಿಯಲ್ಲಿ
ಸಮಾಧಿಯಾಗುತ್ತಾರೆ.

ಸದ್ದಿಲ್ಲ
ಬಿಕ್ಕಳಿಕೆಯಿಲ್ಲ
ನಿಟ್ಟುಸಿರಿಲ್ಲ

ಒಂದು ಸಣ್ಣ ಅಲುಗಾಟವೂ ಇಲ್ಲದೇ
ಕೆಲವರು ಎಷ್ಟೊಂದು ಶಾಂತವಾಗಿ ಸಾಯುತ್ತಾರೆ ಇಲ್ಲಿ !

ಅವರಿಗಾಗಿ ನೀವು
ಏನನ್ನೂ ಮಾಡುವ ಅಗತ್ಯವಿಲ್ಲ
ಸಂಸ್ಕಾರವನ್ನೂ ಸಹ !



ಎಂ. ಡಿ. ಒಕ್ಕುಂದ, ಮುಖ್ಯಸ್ಥರು, ಕನ್ನಡ ವಿಭಾಗ, ಶ್ರೀ ಸಿದ್ಧೇಶ್ವರ ಸರ್ಕಾರೀ ಪ್ರಥಮ ದರ್ಜೆ ಕಾಲೇಜು
ನರಗುಂದ - ೫೮೨ ೨೦೭, ಗದಗಜಿಲ್ಲೆ.

# ಕಣ್ಣು

ಮೂಲ : **ರಸ್ಕಿನ್ ಬಾಂಡ್**
ಅನು : **ಎಸ್. ಜ್ಞಾನಮೂರ್ತಿ**

ರೊಹನಾ ನಿಲ್ದಾಣದವರೆಗೂ ಆ ಬೋಗಿಯಲ್ಲಿ ನಾನು ಒಬ್ಬಂಟಿಯಾಗಿದ್ದೆ. ಅಲ್ಲಿಂದ ಹುಡುಗಿಯೊಬ್ಬಳು ನನ್ನ ಸಹ ಪ್ರಯಾಣಿಕಳಾದಳು. ಅವಳನ್ನು ಬೀಳ್ಕೊಡಲು ಬಂದಿದ್ದ ದಂಪತಿಗಳು ಬಹುಶಃ ಅವಳ ತಂದೆ ತಾಯಿ ಇರಬಹುದು ಎಂದುಕೊಂಡೆ. ಅವರು ಆ ಹುಡುಗಿಯ ಸುರಕ್ಷಿತ ಪ್ರಯಾಣದ ಖಾತರಿಯ ಬಗೆಗೆ ಉದ್ವಿಗ್ನರಾಗಿದ್ದರು. ಆ ಹೆಂಗಸು ಹುಡುಗಿಗೆ, ತನ್ನ ಸಾಮಾನುಗಳನ್ನು ಎಲ್ಲಿಡಬೇಕು, ಯಾವಾಗ ಕಿಟಕಿಯಿಂದ ಹೊರಗೆ ಇಣುಕಬಾರದು ಹಾಗೂ ಅಪರಿಚಿತರೊಂದಿಗೆ ಹೆಚ್ಚು ಮಾತನ್ನು ಹೇಗೆ ನಿಯಂತ್ರಿಸಬೇಕು ಎಂಬುದರ ಬಗೆಗೆ ವಿವರವಾಗಿ ತಿಳಿಸಿ ಹೇಳುತ್ತಿದ್ದಳು. ಕೊನೆಗೆ ಆ ದಂಪತಿಗಳು ವಿದಾಯ ಹೇಳಿದರು. ರೈಲು ನಿಲ್ದಾಣವನ್ನು ಬಿಟ್ಟು ಮೆಲ್ಲನೆ ಹೊರಟಿತು.

ಹೇಳಬೇಕೆಂದರೆ ನಾನು ಎಂದೆಂದಿಗೂ ಸಂಪೂರ್ಣ ಕುರುಡನಾಗಿದ್ದೆ. ನನ್ನ ಕಣ್ಣುಗಳು ಬೆಳಕು ಮತ್ತು ಕತ್ತಲೆಗೆ ಮಾತ್ರ ಪ್ರತಿಕ್ರಿಯಿಸುತ್ತಿದ್ದವು. ಆದ್ದರಿಂದ ಆ ಹುಡುಗಿಯು ನೋಡಲು ಹೇಗಿದ್ದಾಳೆಂಬುದನ್ನು ಹೇಳಲು ನಾನು ಅಸಮರ್ಥನಾಗಿದ್ದೆ. ಆದರ ಆಕೆ ಚಪ್ಪಲಿ ಧರಿಸಿರುವುದು ತಿಳಿಯಿತು. ಅವು ಅವಳ ಹಿಮ್ಮಡಿಗಳಿಗೆ ಪಟಪಟನೆ ಬಡಿಯುತ್ತಿದ್ದವು. ಅವಳ ಚಹರೆಯ ಬಗೆಗೆ ತಿಳಿಯಲು ಸ್ವಲ್ಪ ಸಮಯ ಹಿಡಿಯಬಹುದು ಅಥವಾ ಸಾಧ್ಯವಾಗದಿರಲೂಬಹುದು. ಅವಳ ಧ್ವನಿಯು ನನಗೆ ಇಷ್ಟವಾಯಿತು. ಜೊತೆಗೆ ಅವಳ ಚಪ್ಪಲಿಗಳ ಶಬ್ದವೂ ಸಹ.

“ ನೀವು ಡೆಹ್ರಾಕ್ಕೆ ಹೋಗುತ್ತಿರುವಿರೇನು ?” ನಾನು ಕೇಳಿದೆ. ಬಹುಶಃ ನಾನು ಕತ್ತಲಿನ ಮೂಲೆಯೊಂದರಲ್ಲಿ ಕುಳಿತಿದ್ದನಾದ್ದರಿಂದ ನನ್ನ ಧ್ವನಿಯಿಂದ ಅವಳು ಬೆದರಿದಳು. ಕೊಂಚ ಆಶ್ಚರ್ಯಚಕಿತಳಾದ ಅವಳು:

" ಈ ರೋಗಿಯಲ್ಲಿ ನನ್ನ ಹೊರತು ಬೇರೆ ಯಾರೋ ಇದ್ದಾರೆಂದು ನನಗೆ ಗೊತ್ತಿರಲೇ ಇಲ್ಲ" ಎಂದಳು.

"ಅದೂ ಸರಿಯೇ". ಹಲವಾರು ಸಂದರ್ಭಗಳಲ್ಲಿ ಹೀಗೆಯೇ ಆಗುತ್ತದೆ. ಉತ್ತಮವಾದ ದೃಷ್ಟಿಯಿರುವವರೂ ಸಹ ತಮ್ಮ ಮುಂದಿರುವುದನ್ನು ನೋಡಲು ವಿಫಲರಾಗಿರುತ್ತಾರೆ. ಅವರೂ ಸಹ ಇನ್ನೂ ಬಹಳಷ್ಟನ್ನು ನೋಡಬೇಕಾದದ್ದು ಉಳಿದಿರುತ್ತದೆ. ಹಾಗೆಯೇ ದೃಷ್ಟಿಯಿಲ್ಲದ ಜನರು ಕೇವಲ ಆಯ್ಕೆ ಮಾಡಿದವನ್ನಷ್ಟೇ ಅನುಭವಿಸಿ ನೋಡಿ ತಿಳಿದುಕೊಳ್ಳಬೇಕಾಗಿರುತ್ತದೆ. ಹಾಗೂ ದೃಷ್ಟಿಯ ಪ್ರಜ್ಞೆ ಬೇರೆ ಇತರ ಇಂದ್ರಿಯಗಳಲ್ಲಿ ಲೀನವಾಗಿ ಸಹಾಯ ನೀಡುತ್ತದೆ.

"ನಾನೂ ಸಹಾ ನಿಮ್ಮನ್ನು ನೋಡಲಿಲ್ಲ" ನಾನೆಂದೆ. "ಆದರೆ ನೀವು ಒಳಬಂದದ್ದು ತಿಳಿಯಿತು."

ನನ್ನ ಕುರುಡುತನವನ್ನು ಅವಳ ಅರಿವಿಗೆ ಬಾರದಂತೆ ಕಾಪಾಡಿಕೊಳ್ಳಬಲ್ಲೆನೇ ಎಂದು ಕ್ಷಣಕಾಲ ವಿಚಲಿತನಾದೆ. ನಾನು ಕುಳಿತ ಜಾಗದಿಂದ ಕದಲದೇ ಸೀಟಿಗೆ ಅಂಟಿಕೊಂಡಂತೆ ಕುಳಿತು ಬಿಟ್ಟರೆ ಅದು ಸಾಧ್ಯ ಎನ್ನಿಸಿತು. ಜೊತೆಗೆ ಹಾಗೆ ಮಾಡುವುದೇನೂ ತುಂಬಾ ಕಷ್ಟವಾಗಲಾರದು.

ಆ ಹುಡುಗಿ " ನಾನು ಸಹರೇನಪುರದಲ್ಲಿ ಇಳಿಯುತ್ತೇನೆ. ಅಲ್ಲಿ ನನ್ನ ಚಿಕ್ಕಮ್ಮ ನನಗಾಗಿ ಕಾದಿರುತ್ತಾಳೆ."

"ಹಾಗಾದರೆ ನಾನು ನಿಮ್ಮೊಂದಿಗೆ ಹೆಚ್ಚು ಸಲಿಗೆಯಿಂದ ಮಾತನಾಡದಿರುವುದೇ ಒಳ್ಳೆಯದು. ಚಿಕ್ಕಮ್ಮಂದಿರು ಸಾಮಾನ್ಯವಾಗಿ ಸಂಶಯದ ಪ್ರಾಣಿಗಳು"

"ನೀವು ಹೋಗುತ್ತಿರುವುದೆಲ್ಲಿಗೆ?"

"ಡೆಹ್ರಾಕ್ಕೆ ನಂತರ ಮಸ್ಸೂರಿಗೆ."

"ಓಹ್ ! ನೀವೆಷ್ಟು ಭಾಗ್ಯವಂತರು. ನನಗೂ ಮಸ್ಸೂರಿಗೆ ಹೋಗಬೇಕೆಂಬ ಆಸೆಯಿದೆ. ನಾನು ಅಲ್ಲಿನ ಬೆಟ್ಟಗಳನ್ನು ತುಂಬಾ ಇಷ್ಟಪಡುತ್ತೇನೆ. ವಿಶೇಷವಾಗಿ ಅಕ್ಟೋಬರ್ ಮಾಸದ ಸನ್ನಿವೇಶದಲ್ಲಿ."

"ಹೌದು, ಮಸ್ಸೂರಿಯನ್ನು ಸಂದರ್ಶಿಸಲು ಅದೇ ಸೂಕ್ತ ಸಮಯ." ಹೀಗೆನ್ನುತ್ತಾ ನಾನು ಮೆಲ್ಲನೆ ನೆನಪಿನಂಗಳಕ್ಕೆ ಜಾರಿದೆ.

ಬೆಟ್ಟಗಳೆಲ್ಲವೂ ಕಾಡುಪುಷ್ಪಗಳಿಂದ ಆವೃತವಾಗಿರುತ್ತವೆ. ಸೂರ್ಯ ಸಮಶೀತ ಕಿರಣಗಳನ್ನು ಬೀರುತ್ತಿರುತ್ತಾನೆ. ರಾತ್ರಿ ಸಮಯದಲ್ಲಿ ಅಗ್ಗಿಷ್ಟಿಕೆಯ ಮುಂದೆ ಕುಳಿತು ಸಂಗೀತವನ್ನು ಆಸ್ವಾದಿಸಬಹುದು. ಜೊತೆಗೆ ಪ್ರವಾಸಿಗಳ ಸಂಖ್ಯೆ ವಿರಳವಾಗಿರುತ್ತದೆ. ರಸ್ತೆಗಳೆಲ್ಲ ಪ್ರಶಾಂತವಾಗಿರುತ್ತವೆ.

ಆಕೆ ಮೌನವಾಗಿದ್ದಳು. ನನ್ನ ಮಾತುಗಳು ಅವಳ ಮನಸ್ಸನ್ನು ತಟ್ಟಿರಬಹುದೆಂದುಕೊಂಡೆ. ಅಥವಾ ನನ್ನನ್ನು ಮೂರ್ಖಭಾವುಕ ಜೀವಿ ಎಂದುಕೊಂಡಳೇನೋ? ನಾನು ಮತ್ತೊಂದು ತಪ್ಪು ಮಾಡಿದೆ. "ನಿಮಗೆ ಗೊತ್ತಿರುವಂತೆ ಹೇಗಿರುತ್ತದೆ?" ಎಂದೆ.

ಆಕೆ ನನ್ನ ಪ್ರಶ್ನೆಯಲ್ಲಿನ ತಪ್ಪನ್ನೇನೂ ಗ್ರಹಿಸಲಿಲ್ಲ. ಅವಳು ನನ್ನ ಕುರುಡುತನವನ್ನು ಗಮನಿಸಿ ಬಿಟ್ಟಳೋ ಏನೋ? ಆದರೆ ಅವಳ ಮುಂದಿನ ಪ್ರಶ್ನೆ ನನ್ನ ಸಂಶಯವನ್ನು ನಿವಾರಿಸಿತು.

"ನೀವೇಕೆ ಕಿಟಕಿಯಿಂದ ಹೊರಗೆ ನೋಡುವುದಿಲ್ಲ?" ಕೇಳಿದಳಾಕೆ.

ನಾನು ಕುಳಿತಿದ್ದ ಜಾಗದಿಂದ ಸುಲಭವಾಗಿ ಕಿಟಕಿಯ ಬಳಿಗೆ ಜರುಗಿದೆ. ಹಾಗೂ ಕಿಟಕಿಯ ಸರಳನ್ನು ಹಿಡಿದುಕೊಂಡೆ. ಕಿಟಕಿಯಿಂದ ಹೊರಗೆ ದಿಟ್ಟಿಸಿದೆ. ಅಲ್ಲ. ಕಿಟಕಿಯಿಂದಾಚೆ ಗೋಚರಿಸುವ ಭೂಭಾಗವನ್ನೇ ಗಮನಿಸುತ್ತಿರುವಂತೆ ನಟಿಸಿದೆ. ನಾನು ರೈಲು ಎಂಜಿನ್ನಿನ ಕರ್ಕಶ ಶಬ್ದವನ್ನೂ, ಗಾಲಿಗಳ ಉಜ್ಜುವ ಶಬ್ದವನ್ನೂ ಕೇಳಿಸಿಕೊಳ್ಳತೊಡಗಿದ್ದೆ. ನನ್ನ ಒಳಗಣ್ಣಿನಿಂದ ಹಾದು ಹೋಗಿರುವ ಟೆಲಿಗ್ರಾಫ್ ಅಂಚೆಯ ತಂತಿಯನ್ನು ಕಾಣಬಲ್ಲವನಾಗಿದ್ದೆ.

"ನೀವು ಗಮನಿಸಿದಿರೇನು." ನಾನು ಹೇಳಿದೆ. "ನಾವು ರೈಲಿನಲ್ಲಿ ನಿಂತುಕೊಂಡಿದ್ದರೂ, ಮರಗಳು ಚಲಿಸುತ್ತಿರುವಂತೆ ಕಾಣುತ್ತದೆ. ಅಲ್ಲವೇ?"

"ಅದು ಯಾವಾಗಲೂ ಹಾಗೆಯೇ. ನಿಮಗೆ ಯಾವುದಾದರೂ ಪ್ರಾಣಿಗಳು ಕಂಡವೇನು? ಡೆಹ್ರಾಡ ಸುತ್ತಲ ಕಾಡುಗಳಲ್ಲಿ ಇತ್ತೀಚೆಗೆ ಪ್ರಾಣಿಗಳು ವಿರಳವಾಗಿ ಬಿಟ್ಟಿವೆ."

ನಾನು ಕಿಟಕಿಯಿಂದ ತಿರುಗಿ, ಅವಳ ಧ್ವನಿ ಬಂದೆಡೆಗೆ ನೋಡಿ ಅವಳ ಮುಖವನ್ನು ದಿಟ್ಟಿಸಿದೆ. ಸ್ವಲ್ಪ ಸಮಯ ಇಬ್ಬರೂ ಮೌನವಾಗಿ ಕುಳಿತೆವು.

"ನೀವು ಆಸಕ್ತಿದಾಯಕ ಮುಖವನ್ನೇ ಹೊಂದಿದ್ದೀರಿ " ನಾನು ಕ್ಷಣಕ್ಷಣಕ್ಕೂ ಹೆಚ್ಚು ಧೈರ್ಯವಂತನಾಗುತ್ತಿದ್ದೆ. ನಾನು ಹೇಳಿದ್ದು ಒಂದು ಸುರಕ್ಷಿತ ಅನಿಸಿಕೆಯಾಗಿತ್ತು. ಕೆಲವು ಹುಡುಗಿಯರು ಹೊಗಳಿಕೆಯನ್ನು ಇಷ್ಟಪಡುತ್ತಾರೆ.

ಆಕೆ ಸಂತೋಷದಿಂದ ನಕ್ಕಳು. ಆ ನಗು ಕ್ಷಣಕಾಲ ಅಲ್ಲಿಯೇ ಪಸರಿಸಿತ್ತು.

"ಧನ್ಯವಾದಗಳು. 'ಆಸಕ್ತಿದಾಯಕ ಮುಖ' ಎಂದು ಹೇಳುವುದು ನಿಜಕ್ಕೂ ಒಳ್ಳೆಯ ಅನಿಸಿಕೆ. ಜನರು ನನ್ನ ಮುಖವನ್ನೇ "ಸುಂದರವಾದ ಮುಖ" ಎನ್ನುವುದನ್ನು ಕೇಳಿಕೇಳಿ ಬೇಸತ್ತು ಹೋಗಿದ್ದೇನೆ."

ಓಹ್, ಹಾಗಿದ್ದರೆ ನಿಮಗೆ ಸುಂದರವಾದ ಮುಖವಿದೆ ಅಂತಾಯ್ತು. ನಾನೇ ಅಂದುಕೊಂಡೆ. ನಂತರ ತುಸು ಜೋರಾಗಿ "ಹೌದು ಆಸಕ್ತಿದಾಯಕ ಮುಖವೂ ಸಹ ಸುಂದರ ಮುಖವಾಗಿರಬಲ್ಲದು."

"ನೀವೊಬ್ಬ ಬಲು ಧೈರ್ಯಶಾಲಿ ಯುವಕ". ಆಕೆಯೆಂದಳು. "ಆದರೆ ನೀವೇಕೆ ಅಷ್ಟು ಗಂಭೀರವಾಗಿದ್ದೀರಿ?"

ನನಗೀಗ ಅವಳಿಗೋಸ್ಕರವೇ ನಗಬೇಕೆನ್ನಿಸಿತು. ಆದರೆ ನಗುವೂ ಸಹ ನನ್ನನ್ನು ತೊಂದರೆಗೀಡುಮಾಡಬಲ್ಲದೆಂದು ಒಳಮನಸ್ಸು ಎಚ್ಚರಿಸಿತು.

"ನಾವೀಗ ನೀವು ಇಳಿಯಬೇಕಾದ ನಿಲ್ದಾಣಕ್ಕೆ ಬಂದಿದ್ದೇವೆ. ಸದ್ಯ, ಇದೊಂದು ಕಡಿಮೆ ಅವಧಿಯ ಪ್ರಯಾಣವಾಗಿತ್ತು. ನನಗೆ ಎರಡು ಅಥವಾ ಮೂರು ಗಂಟೆಗಳ ಮೇಲೆ ಒಂದು ನಿಮಿಷವೂ ರೈಲಿನಲ್ಲಿ ಕುಳಿತಿರಲಾಗದು."

ನಾನು ಆಕೆಯ ಮಾತನ್ನು ಸಾಧ್ಯವಾದಷ್ಟು ಹತ್ತಿರದಿಂದ ಕೇಳಿಸಿಕೊಳ್ಳಲು ಬಯಸಿ ಅದಕ್ಕೆ ಪ್ರಯತ್ನಶೀಲನಾಗಿದ್ದೆ. ಅವಳ ಧ್ವನಿ ಜಲಪಾತದ ಜುಳುಜುಳು ಸದ್ದಿನಂತೆ ಹಿತಕರವಾಗಿತ್ತು.

ಅವಳು ರೈಲಿನಿಂದ ಕೆಳಗಿಳಿಯುತ್ತಲೇ ಈ ನಮ್ಮ ಚಿಕ್ಕ ಭೇಟಿಯನ್ನೇ ಮರೆತುಬಿಡಬಹುದು. ಆದರೆ ನನ್ನಿಂದಾಗದು. ಆ ನೆನಪು ನನ್ನ ಪ್ರಯಾಣದ ಕೊನೆಯವರೆಗೂ ಉಳಿದಿರುತ್ತದೆ. ಬಹುಶಃ ಅದಾದ ಕೆಲ ಸಮಯದವರೆಗೂ ಸಹಾ.

ರೈಲು ಒಮ್ಮೆ ಶಿಳ್ಳೆ ಹಾಕಿತು. ಚಕ್ರಗಳು ತಮ್ಮ ಶಬ್ದ ಹಾಗೂ ಚಲನೆಯ ಲಯವನ್ನು ಬದಲಾಯಿಸಿಕೊಳ್ಳತೊಡಗಿದವು.

ಆ ಹುಡುಗಿ ಎದ್ದು ಸಾಮಾನುಗಳನ್ನು ಒಟ್ಟುಗೂಡಿಸಿಕೊಳ್ಳತೊಡಗಿದಳು. ಆಕೆ ತನ್ನ ತಲೆಗೂದಲನ್ನು ಹೆಣೆದಿರುವಳೋ ಅಥವಾ ಸಡಿಲವಾಗಿ ಭುಜದ ಮೇಲೆ ಇಳಿಬಿಟ್ಟಿರುವಳೋ ಇಲ್ಲವೇ ಚಿಕ್ಕದಾಗಿ ಕತ್ತರಿಸಿಕೊಂಡಿರುವಳೋ ಎಂಬ ಬಗ್ಗೆ ಕುತೂಹಲವುಂಟಾಯಿತು.

ರೈಲು ಕ್ಷಣಕ್ಷಣಕ್ಕೂ ನಿಧಾನಗೊಳ್ಳುತ್ತ ನಿಲ್ದಾಣದಲ್ಲಿ ನಿಂತಿತು. ಹೊರಗಡೆ ಹಮಾಲಿ ಹಾಗೂ ವ್ಯಾಪಾರಿಗಳ ತರಾತುರಿಯ ಚೌಕಾಸಿ ಕೇಳುತ್ತಿತ್ತು. ತಟ್ಟನೇ ಏರುಧ್ವನಿಯ ಕರ್ಕಶ ಶಬ್ದವೊಂದು ಬೋಗಿಯ ಬಾಗಿಲಿನಿಂದ ತೂರಿ ಬಂದಿತು. ಅದು ಆ ಹುಡುಗಿಯ ಚಿಕ್ಕಮ್ಮನದಲ್ಲದೆ ಬೇರಾರದ್ದೂ ಆಗಿರಲಿಕ್ಕಿಲ್ಲವೆಂಬುದು ನನ್ನ ಊಹೆಯಾಗಿತ್ತು.

"ಹೋಗಿ ಬರುತ್ತೇನೆ" ಹುಡುಗಿಯೆಂದಳು.

ಅವಳು ನನಗೆ ಅತೀ ಸನಿಹದಲ್ಲಿ ನಿಂತಿದ್ದಳು. ಎಷ್ಟು ಸಮೀಪವೆಂದರೆ ಅವಳು ಉಪಯೋಗಿಸಿದ್ದ ಅತ್ತರಿನ ಸುವಾಸನೆ ನನಗೆ ಮತ್ತುಬರಿಸಿ, ತಲೆಸುತ್ತುವಂತಿತ್ತು. ನಾನು ನನ್ನ ಕೈಯನ್ನೆತ್ತಿ ಆಕೆಯ ತಲೆಗೂದಲನ್ನು ಸ್ಪರ್ಶಿಸಬೇಕೆಂದಿದ್ದೆ. ಅಷ್ಟರಲ್ಲಿ ಅವಳು ಮುಂದಕ್ಕೆ ಸರಿದಳು. ಅವಳು ನಿಂತ ಜಾಗದಲ್ಲಿ ಕೇವಲ ಅತ್ತರಿನ ವಾಸನೆ ಮಾತ್ರ ಹರಡಿತ್ತು.

ನೀವು ಕೋಪಗೊಂಡಾಗ ಹೂಕುಂಡವನ್ನು ಒಡೆದು ನೂರಾರು ಚೂರುಗಳನ್ನಾಗಿಸಬಹುದು. ಆದರೆ ಗುಲಾಬಿಯ ಸುವಾಸನೆ ಮಾತ್ರ ಅಲ್ಲಿಯೇ ಪಸರಿಸಿರುತ್ತದೆ ಬಹುಕಾಲದವರೆಗೂ.

ಬೋಗಿಯ ಬಾಗಿಲಿನಲ್ಲಿ ಕೊಂಚ ಗಡಿಬಿಡಿಯಾದಂತಿತ್ತು. ಏಕೆಂದರೆ ಬೋಗಿಯ ಒಳಬರುತ್ತಿದ್ದ ವ್ಯಕ್ತಿ ಯಾರನ್ನೋ ಕ್ಷಮೆ ಕೇಳುತ್ತಿದ್ದ. ನಂತರ ಬಾಗಿಲು ಮುಚ್ಚಲ್ಪಟ್ಟಿತು. ಜತೆಗೇ ಹೊರಜಗತ್ತಿನ ಬಾಗಿಲೂ ಸಹ ಮುಚ್ಚಿದಂತಾಯಿತು. ನಾನು ಮತ್ತೆ ನನ್ನ ಸ್ಥಳಕ್ಕೆ ಹಿಂದಿರುಗಿದೆ. ರೈಲು ಸಿಬ್ಬಂದಿ ಶಿಳ್ಳೆ ಹಾಕಿ ಬಾವುಟ ಬೀಸಿದ ನಂತರ ರೈಲು ಚಲಿಸಲಾರಂಭಿಸಿತು. ನಾನು ಮತ್ತೊಮ್ಮೆ ಹೊಸ ಸಹಪ್ರಯಾಣಿಕನೊಂದಿಗೆ ಹಿಂದಿನಂತೆಯೇ ನಾಟಕವಾಡಬೇಕಿತ್ತು.

ರೈಲು ಮತ್ತೆ ವೇಗವನ್ನು ಹೆಚ್ಚಿಸಿಕೊಳ್ಳುತ್ತಾ ನಡೆಯಿತು. ಗಾಲಿಗಳ ಉಜ್ಜುವ ಶಬ್ದವೂ ಅಧಿಕವಾಗತೊಡಗಿತು. ನಾನು ಕಿಟಕಿಯೆದುರು ನನಗೆ ಕತ್ತಲಾಗಿರುವ ಹಗಲಿನ ಬೆಳಕನ್ನು ನೋಡುತ್ತಾ ಕುಳಿತೆ.

ಕಿಟಕಿಯಿಂದಾಚೆ ಸಾವಿರಾರು ಘಟನೆಗಳು ಘಟಿಸುತ್ತಲಿದ್ದವು. ಹೊರಗೆ ಬಹುಶಃ ಏನು ನಡೆಯುತ್ತಿರಬಹುದೆನ್ನುವ ಊಹೆಗಳೇ ನನಗೆ ಎಂದೆಂದಿಗೂ ಬೇಸರವುಂಟಾಗದ ಆಸಕ್ತಿಯ ಪಂದ್ಯವಾಗಿತ್ತು.

ಹೊಸ ಸಹ ಪ್ರಯಾಣಿಕ ನನ್ನ ಯೋಚನಾ ಲಹರಿಯನ್ನು ಅಷ್ಟಕ್ಕೇ ಕತ್ತರಿಸಿದ.

“ನಿಮಗೆ ಖಂಡಿತ ಬೇಸರವಾಗಿರಬಹುದು. ಏಕೆಂದರೆ ನಾನು ಹಿಂದಿನ ನಿಲ್ದಾಣದಲ್ಲಿ ಇಳಿದ ಸಹ ಪ್ರಯಾಣಿಕರಷ್ಟು ಆಕರ್ಷಕವಾಗಿಲ್ಲ. ಅದಕ್ಕಾಗಿ ಕ್ಷಮೆ ಕೇಳುತ್ತೇನೆ.”

“ಆಕೆ ಒಬ್ಬಳು ಆಸಕ್ತಿದಾಯಕ ಹುಡುಗಿ” ನಾನು ಹೇಳಿದೆ. “ ಆಕೆಯ ತಲೆಗೂದಲು ಉದ್ದವಾಗಿತ್ತೇ ಅಥವಾ ಚಿಕ್ಕದಾಗಿತ್ತೇ ಎಂದು ಹೇಳಬಲ್ಲಿರಾ?” “ನನಗೇನೂ ಹೊಳೆಯುತ್ತಿಲ್ಲ”. ಆತನೊಂದ ಜಿಜ್ಞಾಸೆಯಲ್ಲಿ ಬಿದ್ದಿರುವವನಂತೆ . “ನಾನು ನಿಜಕ್ಕೂ ಆಕೆಯ ತಲೆಗೂದಲನ್ನು ಗಮನಿಸಲೇ ಇಲ್ಲ. ಬದಲಾಗಿ ಆಕೆಯ ಕಣ್ಣುಗಳನ್ನು ಗಮನಿಸಿದೆ. ಆಕೆಗೆ ಸುಂದರವಾದ ಕಣ್ಣುಗಳಿವೆ. ಆದರೇನು ಅವುಗಳಿಂದ ಆಕೆಗೆ ಯಾವ ಪ್ರಯಾಜನವೂ ಇಲ್ಲವಾಗಿದೆ. ಅವಳು ಸಂಪೂರ್ಣ ಕುರುಡಿಯಾಗಿದ್ದಳು. ನೀವು ಗಮನಿಸಲಿಲ್ಲವೇನು?”

□

---

ಎಸ್. ಜ್ಞಾನಮೂರ್ತಿ, S/O ಶ್ರೀನಿವಾಸಮೂರ್ತಿ, ಟಿ.ವಿ. ಯಲ್ಲಾಪುರ, ಹುಳ್ಳೇನಹಳ್ಳಿ ಅಂಚೆ
ತಿಪ್ಪಸಂದ್ರ ಹೋಬಳಿ, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨೧೩೧.

# ಅಲಿ ಸರ್ದಾರ ಜಾಫ್ರಿಯವರ ನಾಲ್ಕು ಕವಿತೆಗಳು

ಅನು : ವಿಭಾ

## ಗೈರು ಹಾಜರಿ

ನೀನು ಬರದೆ ಇರುವಾಗಲೂ
ನೀನಿಲ್ಲೆ ಇರುತ್ತಿ
ನನ್ನ ಕಣ್ಣ ನೋಟದ ಹಾಗೆ
ನನ್ನ ಹೃದಯ ಬಡಿತದ ಹಾಗೆ
ನನ್ನ ನೋವಿನುರಿಯ ಹಾಗೆ
ಪ್ರೀತಿಯ ಪರಿಮಳದ ಹಾಗೆ
ನಿನ್ನೊಡನೆ ಮುರಿದ ಭಾಷೆ
ಪ್ರಮಾಣಗಳ ತಣ್ಣನೆಯ
ಸಮಾಧಾನ ತಂದಿರುತ್ತಿ.

ನೀನು ಬರದೆ ಇರುವಾಗಲೂ
ನೀನಿಲ್ಲೆ ಇರುತ್ತಿ
ರಾತ್ರಿಯ ಹೃದಯದೊಳಗೆ
ಇರಿಸಿದ ಚಂದ್ರನ ಚೂರಿಯ ಹಾಗೆ
ನಸುಕಿನ ಕೈಗಳು ಸೂರ್ಯನ

ಬಟ್ಟಲು ಹಿಡಿದ ಹಾಗೆ
ಬಯಕೆಯ ರಕ್ತ - ಸಿಕ್ತ ಬಳ್ಳಿಯಲ್ಲಿ
ಅರಳಿದ ಹೂವಿನ ಹಾಗೆ.

ನೀನು ಬರದೆ ಇರುವಾಗಲೂ
ನೀನಿಲ್ಲೆ ಇರುತ್ತಿ
ನೆನಪಿನ ಹಾಗೆ
ಹೃದಯದ ಕಂಪನದ ಹಾಗೆ
ದುಃಖದ ಬಟ್ಟಲು ಚೆಲ್ಲಿದ ಹಾಗೆ
ತುಟಿ-ಗಲ್ಲಗಳ ಎಸಳುಗಳು ಪರಿಮಳಿಸಿದ ಹಾಗೆ
ಅರೆಸತ್ತ ಬಯಕೆಗಳ ಬೂದಿಯ ಎಚ್ಚರಿಸಿದ ಹಾಗೆ

ರಾತ್ರಿಯ ಬಣ್ಣ
ಜಡೆಯಿಂದ ಜಡೆಗೆ ಹರಡುತ್ತಿದೆ
ಅಗಲಿಕೆಯ ರಾತ್ರಿ
ಒಂದಾಗುವ ರಾತ್ರಿಯಂತೆ ಭಾಸವಾಗುತ್ತದೆ
ಪ್ರತಿ ಮುಂಜಾವು ಪ್ರೀತಿಯ ನೆಲದಿಂದ
ಗಾಳಿ ಸಂದೇಶ ತರುತ್ತದೆ
ಪ್ರತಿ ನಸುಕು ಅಗಲಿಕೆಯ
ಮಂತ್ರ ಹಾಡುತ್ತದೆ.
ಈಗ ನೀನು ಬಂದಿರುವೆ
ಬರುವ ಮಾತನ್ನಷ್ಟೆ ಆಡೋಣ
ನೀನೀಗ ಬಂದಿರುವೆ
ನಾ ನಿನಗೇನು ಕೊಡಲಿ
ನನ್ನ ಬಳಿ ಇರುವುದೆಲ್ಲ ಬರಿ ಪ್ರೀತಿ ವಿಶ್ವಾಸ
ನನ್ನ ಬಳಿ ಇರುವುದೆಲ್ಲ ಬರಿ ಒಂದು ಅನಾಥ ಭರವಸೆ.

## ಸದ್ಯದ ಸಮಯ

ಕಣ್ಣೀರ ಹನಿ ಮಿನುಗುತ್ತಿವೆ
ಸಮಯದ ರೆಪ್ಪೆಗಳ ಮೇಲೆ
ಅವು ಅಲುಗಾಡಬಹುದು ಆದರೆ
ಗಲ್ಲದ ಮೇಲಿಳಿಯಲಾರವು.

ಹರೆಯದ ಬಿಸಿ ರಕ್ತವಿದೆ
ಬದುಕಿನ ಹಳೆಯ ಧಮನಿಗಳಲ್ಲಿ

ಅದು ಹರಿಯಬಹುದು ಆದರೆ
ಮೊಗದ ಮೇಲೆ ಹೊಳೆಯಲಾರದು

ಬ್ರಿಟನ್ನಿನ ಕಿರೀಟದಲ್ಲಿ
ವಜ್ರ, ಸೂರ್ಯನಂತೆ ಕಾಣುತ್ತದೆ
ಆದರೆ ಬೆಳಕಿಲ್ಲದ ಭಾರತದ ಹಣೆಯ
ಮೇಲದು ಹೊಳೆಯಲಾರದು

ಆಧುನಿಕ ಯುಗದ ಕೆಂಪು ಗುಲಾಬಿ
ನಿಧಾನವಾಗಿ ಆದರೆ ಖಚಿತವಾಗಿ ಅರಳುತ್ತದೆ
ಅದು ರಹಸ್ಯವಾಗಿ ನಗಬಹುದು
ಆದರೆ ಗಾಳಿಯಲ್ಲಿ ಸುಗಂಧವ ಬೀರಲಾರದು

ಬದುಕಿನ ಬೂದಿಯೊಳಗೊಂದು
ಕಿಡಿ ಅಡಗಿದೆ
ಅದು ಬೂದಿಯ ಕೆಳಗೆ ಸುಡಬಲ್ಲುದೆ
ವಿನಃ ಭುಗಿಲೇಳಲಾರದು

## ಬೆಂಕಿ ಮತ್ತು ಇಬ್ಬನಿ

ಒಂದು ಕ್ಷಣ, ನೀನು ಬೆಂಕಿ
ಮರುಗಳಿಗೆಯೇ ಇಬ್ಬನಿ
ನೀನು ಸಾವಿರ ಮುಖಗಳಿರುವ
ಒಂದು ರತ್ನ
ಕೆಲವೊಮ್ಮೆ ನೀನು ಅಪ್ಸರೆ
ಮರುಗಳಿಗೆಯೇ ಕಲ್ಲಿನ ದೇವತೆ
ನೀನೆ ನನ್ನ ಕೊಲೆಗಾರ್ತಿ
ನೀನೇ ನನ್ನ ಹಡೆದಾಕೆ.

## ಹನಿಗಳು

೧. ಒಂದು ರೊಟ್ಟಿಗಾಗಿ ನಾನು
ನನ್ನ ಮೈ - ಮಾಂಸವನ್ನು ಮಾರಿಕೊಂಡೆ
ಆದರೆ ನೀನೇಕೆ
ನಿನ್ನ ಆತ್ಮವನ್ನು ಮಾರಿಕೊಂಡೆ ?

೨. ಶತಮಾನಗಳಿಂದ ನಕ್ಷತ್ರಗಳು
ಶೋಕಿಸುತ್ತಿವೆ

ಈ ಕಪ್ಪು ರಾತ್ರಿಗೆ
ನಸುಕಿನ ಮುಸುಕನ್ನು ಮುಡಿಸೋಣ

೩. ಹುಚ್ಚು ಮನುಷ್ಯ ಆಕಸ್ಮಾತ್ ಸತ್ತು
ಎಲ್ಲ ನೆತ್ತರೂ ವ್ಯರ್ಥ ಚೆಲ್ಲಿಹೋಯಿತು
ಕಲ್ಲಿನ ಮಳೆ ಬರುವ ಮುನ್ನ
ಕೆಂಡದ ಪ್ರವಾಹ ಬರುವ ಮುನ್ನ



# ಸ್ಟೀವನ್ ಕ್ರೇನ್‌ನ ನಾಲ್ಕು ಕವನಗಳು

ಅನು : ಮ.ಸು. ಮನ್ನಾರ್ ಕೃಷ್ಣರಾವ್

ಸ್ಟೀವನ್ ಕ್ರೇನ್ (Stephen crane), ಅಮೆರಿಕ ಸಂಯುಕ್ತ ಸಂಸ್ಥಾನದ ಒಬ್ಬ ಪ್ರಭಾವಿ ಬರಹಗಾರ ಮತ್ತು ಪತ್ರಿಕೋದ್ಯಮಿ. ೧೮೭೧ರಲ್ಲಿ ಜನಿಸಿ, ಕೇವಲ ಇಪ್ಪತ್ತೊಂಬತ್ತನೆಯ ವಯಸ್ಸಿನಲ್ಲಿ ಗತಿಸಿದ. ಆದರೆ ಅಷ್ಟು ಚಿಕ್ಕ ವಯಸ್ಸಿಗೆ ಕವಿ, ಕಥೆಗಾರ ಮತ್ತು ಕಾದಂಬರಿಕಾರನಾಗಿ ಜನ ಮನ್ನಣೆ ಪಡೆದಿದ್ದ. ಅವನ ಕವನಗಳು ಗಾತ್ರದಲ್ಲಿ ಚಿಕ್ಕವು. ಆದರೆ ಮನ ತಟ್ಟುವುದರಲ್ಲಿ, ಮುಟ್ಟುವುದರಲ್ಲಿ ಅದ್ಭುತವಾದುವು. ಅವುಗಳ ನವುರಾದ ಹಾಸ್ಯ ಚೇತೋಹಾರಿ.

**ವಿದ್ವಾಂಸ**

ಬಂದನೊಬ್ಬ ವಿದ್ವಾಂಸ ನನ್ನ ಬಳಿಗೆ ಒಮ್ಮೆ;
ನುಡಿದನವನು, 'ನಾ ಬಲ್ಲೆ ದಾರಿ, ಬಾ"
ನನಗಾಯಿತಾಗ ಅಮಿತಾನಂದ
ನಡೆದೆವಿಬ್ಬರೂ ಆತುರದಿ ಅಲ್ಲಿಂದ
ತುಸು ಸಮಯದಲ್ಲಿ ತಲುಪಿದೆವು ನಾವು
ಏನೇನೂ ಕಾಣಿಸದ ತಾಣವೊಂದನು.
ಹೆಜ್ಜೆಯಿಡುವುದೆತ್ತ ಕಡೆಗೆ
ಎನುವುದು ತಿಳಿಯದಾಯಿತು ನನಗೆ.
ಹಿಡಿದೆ ನಾನವನ ಕೈಗಳ ಬಿಗಿಯಾಗಿ,
ಆದರೆ ಅವ ನುಡಿದ 'ಎಲ್ಲಿಗೋ ಬಂದಿಹೆವು, ದಾರಿ ತಪ್ಪಿಹೋಗಿ'.

## ದಾರಿಹೋಕ

ದಾರಿಹೋಕನೊಬ್ಬ
ಸತ್ಯಕೆ ಮಾರ್ಗವ ಕಂಡ:
ಅತಿ ಆಶ್ಚರ್ಯಗೊಂಡ.
ತುಂಬಿ ಬೆಳದಿತ್ತಲ್ಲಿ ಕಳೆ,
ಅವನೆಂದ, "ಹಾ!
ನಡೆದಿಲ್ಲ ಯಾರೂ ಇಲ್ಲಿ
ಬಹು ಕಾಲದಿಂದ"
ನಂತರ ಕಂಡನವನು:
ಪ್ರತಿ ಮುಳ್ಳೊಂದು ವಿಚಿತ್ರ ಚಾಕು.
ಗೊಣಗಿದನವನು ಕೊನೆಗೆ," ಸರಿ, ಸರಿ,
ಅನ್ಯ ಮಾರ್ಗಗಳಿರುವುದರಲಿ
ಯಾವುದೇ ಸಂದೇಹವಿಲ್ಲ"

## ಓಡಿದನು ಹಿಡಿಯೆ ದಿಗಂತ

ದಿಗಂತವನೊಬ್ಬ ಹಿಡಿಯೆ
ಬೆಂಬತ್ತುವುದ ನಾ ಕಂಡೆ.
ಸುತ್ತುತ್ತಿದ್ದರಿಬ್ಬರೂ ಚಕ್ರಾಕಾರದಿ
ನನಗಾಯಿತು ಚಿಂತೆ ಅದನು ನೋಡಿ;
ನಾನವನ ಬಳಿಗೆ ನಡೆದೆ
ಮತ್ತು ನುಡಿದೆ,
"ವ್ಯರ್ಥವಿದು ಯತ್ನ
ನೀನೆಂದೂ ಅದನ ......."
"ನೀ ಹೇಳುವುದು ಸುಳ್ಳು"
ಎಂದವನು ಅರಚಿದನು
ಮತ್ತೆ ಓಡಿದನು, ಹಿಡಿಯೆ.

## ಮಿನುಗುವ ಉಡುಪಿನೊಳಿದ್ದ ಯುವಕ

ಮಿನುಗುವ ಉಡುಪಿನೊಳಿದ್ದೊಬ್ಬ ಯುವಕ
ಭೀಕರ ಕಾಡಲಿ ವಿಹರಿಸೆ ಹೋದ;
ಹಿಂದಿನ ಕಾಲದ ಉಡುಪಿನೊಳಿದ್ದ
ಕೊಲೆಗಾರನೊಬ್ಬ ಅವನಿಗೆದುರಾದ.

ರೌದ್ರವ ಮುಖದಲಿ ಪ್ರಕಟಿಸುತ
ಕೈಯಲಿ ಈಟಿಯ ಝಳಪಿಸುತ
ಪೊದೆಯಿಂದ ಹಾರಿ ಹೊರಕೆ ಬಂದು
ಎರಗಿದನವನು ಯುವಕನ ಮೇಲೆ
ನುಡಿದನು ಯುವಕ, "ಸ್ವಾಮಿ, ನನ್ನ ನಂಬಿ;
ನನಗಾಗುತಿದೆ ಮಹಾ ರೋಮಾಂಚನ,
ಮಧ್ಯಯುಗದ ರೀತಿಯಲಿ, ಹೀಗೆ
ಉತ್ತಮ ದಂತಕಥೆಗಳಲಿ ಬರುವ ಹಾಗೆ,
ಸಾವನಪ್ಪುವುದಕೆ; ಆಹಾ, ಏನು ಆನಂದ"
ನಂತರ ನಗುತ ಸ್ವೀಕರಿಸಿದನು ಈಟಿಯ ಇರಿತ
ಅಪ್ಪಿದನು ಮರಣ, ತೃಪ್ತ ಭಾವವ ಬೀರುತ.

□

ಮ.ಸು. ಮನ್ನಾರ್ ಕೃಷ್ಣ ರಾವ್, ೯೮೪/೧. ೧೧ನೇ 'ಆ' ಮುಖ್ಯರಸ್ತೆ, ೩ನೇ ವಿಭಾಗ
ರಾಜಾಜಿನಗರ, ಬೆಂಗಳೂರು ೫೬೦ ೦೧೦.
ದೂರವಾಣಿ : ೨೩೩೫ ೯೯೨೬

# ಗಂಟೆ

ಹಿಂದಿಮೂಲ : ಕುಂವರ ನಾರಾಯಣ್
ಅನು : ಡಿ.ಎನ್. ಶ್ರೀನಾಥ್

ಬಾರಿಸಿತು ದೂರವಾಣಿಯ ಗಂಟೆ....
ಹೇಳಿದೆ ನಾನು-ನಾನಿಲ್ಲ
ಮತ್ತೆ ನಿದ್ರಿಸಿದೆ ಮಗ್ಗುಲಾಗಿ
ಬಾರಿಸಿತು ಬಾಗಿಲ ಗಂಟೆ
ಹೇಳಿದೆ ನಾನು-ನಾನಿಲ್ಲ
ಮತ್ತೆ ನಿದ್ರಿಸಿದೆ ಮಗ್ಗುಲಾಗಿ
ಬಾರಿಸಿತು ಅಲಾರಾಂ ಗಂಟೆ
ಹೇಳಿದೆ ನಾನು-ನಾನಿಲ್ಲ
ಮತ್ತೆ ನಿದ್ರಿಸಿದೆ ಮಗ್ಗುಲಾಗಿ
ಅದೊಂದು ದಿನ
ಬಾರಿಸಿತು ಸಾವಿನ ಗಂಟೆ
ಎದ್ದು ಕೂತೆ ತಡಬಡಿಸಿ
ನಾನಿದ್ದೇನೆ-ನಾನಿದ್ದೇನೆ-ನಾನಿದ್ದೇನೆ
ಹೇಳಿತು ಸಾವು
ನಿದ್ರಿಸಿಬಿಡು ಮಗ್ಗುಲಾಗಿ!

□

ಡಿ.ಎನ್. ಶ್ರೀನಾಥ್, 'ನವನೀತ', ೨ನೇ ಕ್ರಾಸ್, ಅಣ್ಣಾಜಿರಾವ್ ಲೇಔಟ್, ೧ನೇ ಹಂತ
ವಿನೋಬಾನಗರ, ಶಿವಮೊಗ್ಗ-೫೭೭ ೨೦೪

# ರಬ್ಬರ್ ಗೂಬೆ

ಮೂಲ: ಎಂ.ಟಿ. ವಾಸುದೇವನ್ ನಾಯರ್
ಅನು: ಡಾ. ಪ್ರಮೀಳಾ ಮಾಧವ್

ಹನ್ನೆರಡು ವರ್ಷಗಳ ಬಳಿಕ ಲೀಲಳ ಬಗ್ಗೆ ನಾನಿಂದು ನೆನಪು ಮಾಡಿಕೊಂಡೆ.

ಲೀಲಳೆಂದು ಕೇಳುವಾಗ ನೀವು ತಕ್ಷಣ ಇನ್ನೇನೋ ಯೋಚಿಸುವಿರಿ. ತಪ್ಪು ಭಾವನೆಗೆ ಅವಕಾಶವಾಗದಿರಲು ನಾನು ಮೊದಲೇ ಹೇಳುವುದೊಳ್ಳೆಯದು. ಅವಳು ನನ್ನ ಸೋದರಿ.

ಈ ವಾಸ್ತವವನ್ನು ಅರಿತಿರುವವರು ಲೋಕದಲ್ಲಿ ಬಹಳ ಕಡಿಮೆ ಜನ.

ಲೀಲಳ ಬಗ್ಗೆ ನನಗೆ ನೆನಪಾಗಲು ಕಾರಣ ಪೆಟ್ಟಿಗೆಯ ಅಡಿಯಲ್ಲಿ ಕಣ್ಣಿಗೆ ಬಿದ್ದ ಒಂದು ರಬ್ಬರ್ ಗೂಬೆ. ಹಳೆಯ ಬಟ್ಟೆ, ಕಾಗದಗಳನ್ನೆಲ್ಲ ತುಂಬಿಸಿಟ್ಟ ಪೆಟ್ಟಿಗೆಯ ಪರಿಶೋಧನೆಯ ಕೆಲಸಕ್ಕೆ ತೊಡಗಿದ್ದೆ. ನೋಡುತ್ತಿದ್ದಂತೆ ಆ ಪುರಾತನವಾದ ರಬ್ಬರ್ ಗೂಬೆ ಅದರೊಳಗೆ ಮಲಗಿರುವುದು ಕಾಣಿಸಿತು. ಅದರ ಬಣ್ಣ ಮಾಸಿತ್ತು; ಆಕರ್ಷಣೆಯೂ ಇರಲಿಲ್ಲ. ಆದರೆ ಸ್ಫಟಿಕದಿಂದ ಮಾಡಿದ್ದ ಅದರ ಕಣ್ಣುಗಳು ಮಾತ್ರ ಫಳಫಳನೆ ಮಿನುಗುತ್ತಿದ್ದವು.

ಒಂದು ಕಾಲದಲ್ಲಿ ಅದು ನನಗೆ ಅತ್ಯಂತ ಪ್ರಿಯವಾದ ಒಡನಾಡಿಯಾಗಿತ್ತು. ನಾನದರ ಒಡೆಯನಾದುದರ ಬಗ್ಗೆ ಹೆಮ್ಮೆ ಪಟ್ಟಿದ್ದೆ. ತುಂಬ ತುಂಬ ಬಯಸಿದಾಗ ನನಗದು ಸಿಕ್ಕಿತ್ತು. ಅದನ್ನು ಚೀಲದೊಳಗಿಟ್ಟು ಸ್ಕೂಲಿಗೆ ತಗೆದುಕೊಂಡು ಹೋದಾಗ ನಾನು ಎಲ್ಲರಿಗಿಂತ ಮಿಗಿಲಾದವನೆಂಬ ಭಾವನೆ ಬಂದಿತ್ತು. ಯಾಕೆಂದರೆ ನನ್ನ ಚೀಲದೊಳಗೆ ಬೆಲೆ ಬಾಳುವ ಒಂದು ವಸ್ತುವಿದೆ. ಅಪ್ಪುಕುಟ್ಟನ ಹಳೆಯ ಕೊಡೆಗಿಂತ, ಎಬ್ರಾನ್ ಕುಟ್ಟಿಯ ಮೌತ್‌ಆರ್ಗನ್‌ಗಿಂತ ಮಿಗಿಲಾದುದು ನನ್ನ ಗೂಬೆ. ಅದು ಕೊಲೊಂಬೋದಿಂದ ತಂದುದಾಗಿತ್ತು!

ರಬ್ಬರ್ ಗೂಬೆಯಲ್ಲಿ ಎರಡು ವಿಶೇಷಗಳಿವೆ. ಅಡಿಭಾಗದಿಂದ ಒತ್ತಿ ಅಮುಕಿದರೆ ಅದರ ಹೊಟ್ಟೆ ತೆರೆಯುತ್ತದೆ. ಅದರೊಳಗಿರುವ ಮೃದುವಾದ ಮೆತ್ತೆಯ ಮೇಲೆ ಕಡುನೀಲಿ ಬಣ್ಣದ ಒಂದು ಪುಟ್ಟ ಗಾಜಿನ ಬಿರಡೆ. ಅದರೊಳಗಿರುವುದು ಸೆಂಟು. ಮುಚ್ಚಳ ತೆರೆದರೆ ಮಲ್ಲಿಗೆ ಹೂವಿನ ಪರಿಮಳ ತರಗತಿಯೊಳಗೆಲ್ಲ ಪಸರಿಸುತ್ತಿತ್ತು. ಹೆಣ್ಣುಮಕ್ಕಳು ಕುಳಿತುಕೊಳ್ಳುವ ಬೆಂಚುಗಳಿಂದ ಪಿಸುಧ್ವನಿ ಕೇಳಿಸುತ್ತಿತ್ತು. ಆ ಹುಡುಗನ ಕೈಯಲ್ಲಿದೆ.

'ಆ ಹುಡುಗ'ನೆಂದರೆ ನಾನಾಗಿರುವುದು ನನಗೆ ಅಭಿಮಾನದ ವಿಷಯವಾಗಿತ್ತು.

ಹಾಗಿದ್ದೂ ಅದನ್ನು 'ಮಾಪಿಳ್ಳೆ ಸೆಂಟು' ಎಂದು ತುಚ್ಛೀಕರಿಸಿದ ಆ ಶಂಕುಣ್ಣಿಯೊಂದಿಗೆ ಜಗಳ ಕಾಯ್ದುದಕ್ಕೆ ನನಗೆ ಇವತ್ತೂ ಪಶ್ಚಾತ್ತಾಪವಿಲ್ಲ.

ಇನ್ನೊಂದು ವಿಶೇಷವೆಂದರೆ ಹಿಂಭಾಗದಲ್ಲಿರುವ ಕಂಬಿಗಳನ್ನು ಮೀಟಿದಾಗ ಆ ಗೂಬೆ ಕಣ್ಣುಮಿಟುಕಿಸುತ್ತಿತ್ತು.

ಮಧ್ಯಾಹ್ನದ ಹೊತ್ತು ಹುಡುಗರ ಮುಂದೆ ಅದನ್ನು ಪ್ರದರ್ಶಿಸುವಾಗ ಮಾಯಾಕುದುರೆಯ ಸರದಾರನಾದ ರಾಜಕುಮಾರನ ಕತೆ ಅಜ್ಜಿ ಹೇಳುತ್ತಿದ್ದುದು ಜ್ಞಾಪಕಕ್ಕೆ ಬರುತ್ತಿತ್ತು. ಆ ಗೂಬೆ ತನ್ನ ಜೀವವಾಗಿತ್ತು. ಇನ್ನೊಬ್ಬರ ಕೈಗಿಡುವುದಕ್ಕೂ ಮನಸ್ಸು ಒಪ್ಪುತ್ತಿರಲಿಲ್ಲ. ಅದರ 'ಮೆಕಾನಿಸಮ್' ಗೊತ್ತಿರುವುದು ನನಗೆ ಮಾತ್ರ ತಾನೆ?

ನಾನು ಪ್ರಾರಂಭಿಸಿದ್ದು... ಓ... ಲೀಲಳನ್ನು ಕುರಿತು. ಒಂದನ್ನು ಹೇಳಲು ಮರೆತುಬಿಟ್ಟೆ, ರಬ್ಬರ್ ಗೂಬೆಯನ್ನು ನನಗೆ ಉಡುಗೊರೆಯಾಗಿ ಕೊಟ್ಟಿದ್ದು ಲೀಲಳೇ.

ಬದುಕಿನಿಂದ ಕಿತ್ತು ತೆಗೆದ ಒಂದು ಹಳೆಯ ಪುಟ ಇದು.

ಗುಂಡಿಗಳಿಲ್ಲದ ಮಾಸಿದ ಚಲ್ಲಣವನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡು ತಿರುಗಾಡುವ ಕಾಲ. ಹತ್ತೋ ಹನ್ನೊಂದೋ ವಯಸ್ಸು. ಅಮ್ಮ, ಅಣ್ಣಂದಿರಿಂದ ಏಟು ಬಯ್ಗಳನ್ನು ತಿನ್ನುತ್ತಿದ್ದೆ. ಅಮ್ಮಾಳು ಅಮ್ಮನ ಮಗ ವಾಸು ಅಸಾಧ್ಯ ತುಂಟನೆಂದೇ ಬಹುಜನರ ಅಭಿಪ್ರಾಯವಾಗಿತ್ತು. ಅದನ್ನು ಪ್ರಚಾರ ಮಾಡಿದ್ದು ನೆರೆಮನೆಯ ಪಾರು ಅಮ್ಮನೇ. ಮಧ್ಯಾಹ್ನ ಅವರು ನಮ್ಮ ನಡುಮನೆಗೆ ಮೆಲ್ಲನೆ ಬಂದು ಬಿಡುತ್ತಿದ್ದರು. ಅಮ್ಮನ ತಲೆಯಿಂದ ಹೇನು ತೆಗೆಯುತ್ತ ಅದೂ ಇದೂ ಹರಟುತ್ತಿದ್ದರು. ಅದನ್ನು ಕೇಳಲು ನನಗೆ ಇಷ್ಟ.

ಮೈನೆರೆದ ಬಾಲಿಕೆಯ ಬಗ್ಗೆಯೂ ಮಾತನಾಡುತ್ತಿದ್ದರು. ಆದರೂ ಕೇಳಲು ರಸವತ್ತಾಗಿರುತ್ತಿತ್ತು. ಅದರ ಮಧ್ಯೆ ಪಾರು ಅಮ್ಮ ಹೇಳುತ್ತಿದ್ದರು "ಮಗೂ, ಆ ವೀಳ್ಯದೆಲೆ ಪೆಟ್ಟಿಗೆ ತಾ..."

ಅದೀಗ ರಗಳೆ. ನಾನದನ್ನು ಲೆಕ್ಕಿಸದಿದ್ದರೆ ಅಮ್ಮನ ಆಜ್ಞೆ. ನಾನು ಅದಕ್ಕೂ ಬಗ್ಗುತ್ತಿರಲಿಲ್ಲ. ಪುನಃ ಗದರಿಸಿದರೆ ನಾನು ಏನಾದರೂ ಎದುರು ವಾದಿಸುತ್ತಿದ್ದೆ. ಆಗ ಬೆನ್ನಿಗೆ ಬೀಳುತ್ತಿತ್ತು.

ಇದು ಸರ್ವೇಸಾಮಾನ್ಯವಾಗಿ ನಡೆಯುತ್ತಿದ್ದ ಸಂಗತಿ. ನೆರೆಕರೆಯ ಹೆಂಗಸರ ಅಭಿಮಾನಕ್ಕೆ ಅಮ್ಮ ಪಾತ್ರಳಾಗಿದ್ದಳು. ಯಾಕೆಂದರೆ ಅಮ್ಮನಿಂದ ಹಣವೊ, ಅಕ್ಕಿಯೊ ಸಾಲ ಸಿಗುತ್ತಿತ್ತು. ಜಾತ್ರೆಗೆ ಹೋಗುವಾಗ ಹಾಕುವ ಆಭರಣಗಳನ್ನು ಸಾಲ ಮಾಡಲೂ ಅಮ್ಮನ ಸಹಾಯಬೇಕು.

'ತಿಂಗಳು, ತಿಂಗಳು ಆಯಮ್ಮನಿಗೆ ಎಷ್ಟೊಂದು ದುಡ್ಡು ಬರುತ್ತದೆ?'

'ಅವರಿಗೇನು, ಕೊಲೊಂಬೊದಿಂದ ಬಾಚಿಕೊಂಡು ಬರುತ್ತಾರೆ' ಜನರು ಹೀಗೆ ಮಾತನಾಡುತ್ತಿದ್ದರು.

ತಂದೆ ಹಲವು ವರ್ಷಗಳಿಂದ ಸಿಲೋನಿನಲ್ಲೇ ಇದ್ದಾರೆ. ಪ್ರತಿ ತಿಂಗಳು ಧಾರಾಳವಾಗಿ ಹಣ ಕಳುಹಿಸುತ್ತಾರೆ.

ನಾವು ನಾಲ್ವರು ಗಂಡುಮಕ್ಕಳು. ಸೋದರಿಯರಿಲ್ಲ. ಬೇರೆಯವರ ದೃಷ್ಟಿಯಲ್ಲಿ ಅದು ಒಳ್ಳೆಯ ವಿಚಾರ. ಪಾರು ಅಮ್ಮನ ಅಭಿಪ್ರಾಯದಲ್ಲಿ ಅದು ಅಮ್ಮನ ಪುಣ್ಯದ ಫಲ! ಅದಕ್ಕೆ ಪಾರು ಅಮ್ಮನ ಮನೆಯ ಹೆಣ್ಣುಮಕ್ಕಳ ಪಡೆಯೆ ಕಾರಣವೆಂದು ನನ್ನ ಊಹೆ. ಹದಿಮೂರು ಜನ ಹೆಂಗಸರಿರುವ ಕುಟುಂಬ ಅವರದು.

ಒಂದು ಹೆಣ್ಣುಮಗು ಬೇಕೆಂದು ಅಪ್ಪ, ಅಮ್ಮ ಆಸೆಪಟ್ಟಿದ್ದರು. ಮೂರ ಜನ ಗಂಡುಮಕ್ಕಳಾದ ಮೇಲೆ ಅಮ್ಮ ಗರ್ಭಿಣಿಯಾಗಿದ್ದಾಗ ಜೋಯಿಸರು ಹೇಳಿದ್ದರು 'ಇದು ಖಂಡಿತ ಹೆಣ್ಣುಮಗು'.

ಎಲ್ಲರಿಗೂ ಸಂತೋಷವಾಗಿತ್ತು. ಹೇಳದ ಹರಕೆಗಳಾಗಲೀ, ಮಾಡದ ಉಪವಾಸಗಳಾಗಲೀ, ಹೋಗದ ದೇವಾಲಯಗಳಾಗಲೀ ಇರಲಿಲ್ಲ. ಆದರೆ ಅವರೆಲ್ಲರ ನಿರೀಕ್ಷೆಗಳನ್ನು ಸುಳ್ಳು ಮಾಡಿ ಗಂಡು ಮಗುವೇ ಅವತರಿಸಿದ. ವಿನಯಪೂರ್ವಕವಾಗಿ ಅರಿಕೆ ಮಾಡಿಕೊಳ್ಳುತ್ತಿದ್ದೇನೆ, ಆ ನಿರ್ಭಾಗ್ಯ ಶಿಶುವೇ ಈ ನಾನು.

ನನ್ನ ಬದಲು ಒಂದು ಹೆಣ್ಣುಮಗು ಹುಟ್ಟಬೇಕಿತ್ತು... ಅದಕ್ಕಾಗಿ ದೇವರನ್ನು ಶಪಿಸಿದ್ದಾಯ್ತು.

ಗುಂಡಿಗಳಿಲ್ಲದ ಹರಿದ ಚಡ್ಡಿ ಹಾಕಿ ಭಿಕಾರಿಯಂತೆ ತಿರುಗಾಡುವ ಕಾಲದಲ್ಲಿ- ಅಂದು ನನಗೆ ತಂದೆಯ ನೆನಪಿಲ್ಲ. ಕೋಣೆಯಲ್ಲಿ ಅನೇಕ ಕಡೆ ಅಪ್ಪನ ಫೋಟೋ ನೋಡಿದ್ದೇನೆ. ನನಗೆ ನಾಲ್ಕು ವರ್ಷವಾದಾಗ ಸಿಲೋನಿಗೆ ಹೋದವರು ಆಮೇಲೆ ಬರಲಿಲ್ಲ. ಅಣ್ಣಂದಿರನ್ನು ಕೇಳಿದರೆ ಅವರು ನನ್ನನ್ನು ಹಾಸ್ಯ ಮಾಡುತ್ತಾರೆ. ನಾನು ಹಿಡಿಯಾಗುತ್ತೇನೆ. ಅವರು ಸಿಲೋನಿನಲ್ಲಿ ಅನೇಕ ವರ್ಷ ವಾಸ ಮಾಡಿದ್ದಾರೆ. ನನಗಿಂತ ಅಧಿಕಾರಯುತವಾಗಿ ಅವರು ಅಪ್ಪನ ಬಗ್ಗೆ ಮಾತನಾಡುತ್ತಾರೆ.

ನಾನು ಅಮ್ಮನ ಹೊಟ್ಟೆಯಲ್ಲಿರುವಾಗ ಅಮ್ಮ ಮತ್ತು ಅಣ್ಣಂದಿರು ಊರಿಗೆ ಹಿಂತಿರುಗಿದರು. ಅನಂತರ ವರ್ಷದಲ್ಲಿ ಎರಡು, ಮೂರು ತಿಂಗಳು ರಜೆಯಿರುವಾಗ ತಂದೆಯೇ ಊರಿಗೆ ಬಂದು ಹೋಗುತ್ತಿದ್ದರು.

ಅಮ್ಮನಿಂದ ನನಗೆ ಧಾರಾಳವಾಗಿ ಏಟುಗಳು ಬೀಳುತ್ತಿದ್ದವು. ಅಣ್ಣಂದಿರೂ ಆಗಾಗ್ಗೆ ಹೊಡೆಯುತ್ತಿದ್ದರು. ಒಬ್ಬನೇ ಕುಳಿತಿದ್ದಾಗ ನನ್ನ ದುರ್ದೆಶೆಯ ಬಗ್ಗೆ ಯೋಚಿಸುವುದಿದೆ. ಒಬ್ಬ ಮಗಳ ಜಾಗವನ್ನು ಆಕ್ರಮಿಸಿ ಹುಟ್ಟಿದುದೇ ಕಾರಣವಾಗಿರಬೇಕು.

ಅಪ್ಪ ಊರಿಗೆ ಬರದಿರುವುದಕ್ಕೂ ನನ್ನ ಮೇಲಿನ ಕೋಪವೇ ಕಾರಣವಾಗಿರಬಹುದೆ?

ರಾತ್ರಿ ಮಲಗುವಾಗ ಏನೆಲ್ಲ ಯೋಚಿಸುತ್ತಿದ್ದೆ. ಯೋಚಿಸಿ ಯೋಚಿಸಿ ಕೊನೆಗೊಮ್ಮೆ ಮೈಮರೆತು ಕೇಳುತ್ತಿದ್ದೆ, 'ಅಮ್ಮಾ, ನಾನು ಹೆಣ್ಣುಮಗುವಾಗಿರುತ್ತಿದ್ದರೆ...'

'ಸುಮ್ಮನೆ ಮಲಕ್ಕೊಳ್ಳೋ...'

ಅಮುಕಿ ಹಿಡಿದು ಕೋಪದಿಂದ ಅಮ್ಮ ಚಿವುಟುತ್ತಿದ್ದರು. ಒಂದು ಹೆಣ್ಣುಮಗು ಜನಿಸದಿರುವುದರ ಬಗ್ಗೆ ಅಪ್ಪ, ಅಮ್ಮಂದಿರಿಗೆ ದುಃಖವಿದೆ, ಅದು ನನಗೂ ಅರ್ಥವಾಗುತ್ತಿತ್ತು.

ಒಬ್ಬಳು ಸೋದರಿಯಿರುವುದು ಒಳ್ಳೆಯದೇ. ನನ್ನ ಕ್ಲಾಸಿನ ಹುಡುಗರಿಗೆಲ್ಲ ಅಕ್ಕ, ತಂಗಿಯರಿದ್ದಾರೆ. ಗೋಪಿಯ ಪುಸ್ತಕಗಳಿಗೆಲ್ಲ ಕ್ಯಾಲೆಂಡರಿನ ಹಾಳೆಗಳಿಂದ ಸೊಗಸಾಗಿ ರಟ್ಟು ಹಾಕಿಕೊಡುವುದು ಅವನ ಭಾನು ಅಕ್ಕ. ಅವನ ಪುಸ್ತಕಗಳಲ್ಲಿ ಹೆಸರು ಬರೆದು ಕೊಡುವುದೂ ಭಾನು ಅಕ್ಕನೇ. ಎಷ್ಟು ಸುಂದರವಾದ ಅಕ್ಷರಗಳು! ಕರುಣಾಕರನ ದೊಡ್ಡಕ್ಕನಿಗೆ ಮದುವೆಯಾಯ್ತು. ದೊಡ್ಡಮೀಸೆಯ, ಚಿಕ್ಕವಾಚು ಕಟ್ಟಿದ ವ್ಯಕ್ತಿ ಅವನ ಅಕ್ಕನನ್ನು ಮದುವೆಯಾದುದು. ಆತನೂ ಆತನ ಗೆಳೆಯರೂ ಬಂದಾಗ ಆತನ ಕಾಲು ತೊಳೆದದ್ದು ಕರುಣಾಕರನಂತೆ. ರಾತ್ರಿಯೆಲ್ಲ ಜೋರಾಗಿ ನುಡಿಸುತ್ತಿದ್ದ ನಾದಸ್ವರವನ್ನು ನಾನೂ ಕೇಳಿದ್ದೆ.

ಅದೆಲ್ಲ ಒಳ್ಳೆಯದೆ. ಆದರೂ ಕಾಲು ತೊಳೆಸುವುದು ನನಗಷ್ಟು ಇಷ್ಟವಾಗಲಿಲ್ಲ.

ಅವನು ಇನ್ನೂ ತುಂಬ ಹೇಳಿದ. "ನಾನು ಹೇಗೆ ಗೊತ್ತಾ ಅವರನ್ನು ಕರೆಯುವುದು? 'ಭಾವಾ' ಅಂತ."

ಕರುಣಾಕರನೂ, ಗೋಪಿಯೂ ಅದೃಷ್ಟವಂತರೆಂದು ತೋರಿತು - ಮನೆಯಲ್ಲಿ ಒಂದು ಮದುವೆ ಸಮಾರಂಭ ನಡೆಯುವುದು ಸಂತೋಷದ ಸಂಗತಿ. ಅಲಂಕೃತಗೊಂಡ ಚಪ್ಪರ, ಮೆಟ್ರೋಮ್ಯಾಕ್ಸ್ ದೀಪಗಳು, ಜನಗಳ ಓಡಾಟ, ಮನೆಯ ಒಳಗೆ, ಹೊರಗೆ ತುಂಬಿದ ಹೆಂಗಸರು... ಒಂದು ಮರೆತು ಬಿಟ್ಟೆ, ಗ್ರಾಮಫೋನು, ಹಾಡು.

ನನ್ನ ಮನೆಯಲ್ಲಿ ಮದುವೆಯ ಸಂಭ್ರಮವುಂಟಾಗಲು ಯಾವುದೇ ದಾರಿಯಿಲ್ಲ. ನನಗೊಬ್ಬಳು ಅಕ್ಕನಿಲ್ಲ....!

ನನ್ನ ಪುಸ್ತಕಗಳಿಗೆ ಸೊಗಸಾದ ಹೊದಿಕೆಗಳಿಲ್ಲ. ಸುಂದರವಾದ ಅಕ್ಷರಗಳಿಂದ ಹೆಸರು ಬರೆದಿಲ್ಲ. ನನಗೊಬ್ಬ ಭಾವನಿಲ್ಲ....!

ಇವೆಲ್ಲ ಇದ್ದರಲ್ಲವೇ ಕರುಣಾಕರನ ಮನೆಗಿಂತ ನಮ್ಮದು ಮಿಗಿಲಾಗುವುದು. ಆಗ ಕರುಣಾಕರನು ನನ್ನನ್ನು ನೋಡಬೇಕು. ಅವನ ಮನೆಯ ಮದುವೆ ಅಷ್ಟೇನೂ ಚೆನ್ನಾಗಿಲ್ಲ. ಆದರೂ ಅವನೆಷ್ಟು ಬಡಾಯಿ ಕೊಚ್ಚುತ್ತಾನೆ...!

ನನ್ನ ಪುಸ್ತಕಗಳಿಗೆ ನಾನೇ ರಟ್ಟು ಹಾಕುವುದು ಅಚ್ಚುಕಟ್ಟಾಗಿ ಬರುವುದಿಲ್ಲ. ಅಣ್ಣಂದಿರೊಡನೆ ಹೇಳಿದರೆ ಬಯ್ತಾರೆ. ಎದುರು ವಾದಿಸಿದರೆ ತರಲೆಯೆಂಬ ಬಹುಜನಾಭಿಪ್ರಾಯವನ್ನೇ ಮನ್ನಿಸಿ ತಲೆಗೊಂದು 'ಮೊಟ್ಟೆ' ಸನ್ಮಾನಿಸುತ್ತಾರೆ.

ತಂದೆಯ ಪತ್ರಗಳು ವಾರವಾರ ಬರುತ್ತಿದ್ದುವು. ಅಮ್ಮ ಶ್ರದ್ಧೆಯಿಂದ ಓದುತ್ತಿದ್ದರು. ಹತ್ತನೆಯ ತರಗತಿಯ ದೊಡ್ಡಣ್ಣ ಓದುವಾಗ ಇನ್ನೊಮ್ಮೆ ಕೇಳಬೇಕು.

..... ಮಕ್ಕಳೆಲ್ಲರಿಗೂ ಆರೋಗ್ಯವೆಂದು ಭಾವಿಸುತ್ತೇನೆ. ಅವರ ವಿಷಯಗಳನ್ನೆಲ್ಲ ಪ್ರತ್ಯೇಕವಾಗಿ ಬರೆಯುತ್ತೀಯಲ್ಲ.....

ಅದಮ್ಯವಾದ ಆವೇಶದಿಂದ ನಾನು ಅವುಗಳನ್ನು ಕೇಳುತ್ತಿದ್ದೆ. ಮಕ್ಕಳು ಎನ್ನುವುದರಲ್ಲಿ ನಾನೂ ಸೇರುತ್ತೇನಲ್ಲ.?

ಮುನ್ನೂರು ಗಳಿಗೆಗಳಿಗೂ ಹೆಚ್ಚು (ಐದುದಿನ) ಪ್ರಯಾಣ ಮಾಡುವಷ್ಟು ದೂರದ ಊರಿನಲ್ಲಿ ಉದ್ಯೋಗಿಯಾಗಿರುವುದರ ಬಗ್ಗೆ ನಾನು ಯೋಚಿಸುತ್ತಿದ್ದೆ. ಅವರು ಒಂದು ಕಂಪೆನಿಯಲ್ಲಿ ಕೆಲಸ ಮಾಡುತ್ತಾರಂತೆ. ಅಣ್ಣಂದಿರೆಲ್ಲ ಅಪ್ಪನ ಆಫೀಸಿಗೆ ಹೋಗಿದ್ದರು.

ಸಿಲೋನಿನ ಬಗ್ಗೆ ಏನು ಹೇಳಿದರೂ ನಾನು ಗಮನವಿಟ್ಟು ಆಲಿಸುತ್ತಿದ್ದೆ. ಎಲ್ಲಾದರೂ ಅಷ್ಟೆ. ಅಲ್ಲಿಯವರು ಮಾತನಾಡುವುದು ನಮಗೆ ಅರ್ಥವಾಗುವುದಿಲ್ಲವಂತೆ. ಯಾಕೆಂದರೆ ಅವರು ಯಾವುದೋ ಭಾಷೆ ಮಾತನಾಡ್ತಾರೆ. ಅಲ್ಲಿಯ ಜನಗಳು ಬಹಳ ಕ್ರೂರಿಗಳು. ಮಕ್ಕಳೇನಾದರೂ ರಸ್ತೆಯಲ್ಲೋ, ಇನ್ನೆಲ್ಲಾದರೋ ಕಾಣಸಿಕ್ಕಿದರೆ ಸಾಕು ಸೊಂಟದಿಂದ ಕತ್ತಿ ಹಿಡಿದು ಕತ್ತು ಕತ್ತರಿಸಿ ಬಿಸಾಡುತ್ತಾರೆಂದು ಬಾಲಣ್ಣ ಹೇಳುವುದು. ಅಂಥ ಘಟನೆಯನ್ನು ಸ್ವಂತ ಕಣ್ಣುಗಳಿಂದಲೇ ಕಂಡಿದ್ದಾನಂತೆ ದೊಡ್ಡಣ್ಣ.

ಅದು ತಿಳಿದಾಗ ಭಯವಾಯ್ತು. ಅಂಥ ಕ್ರೂರಿಗಳ ಮಧ್ಯೆಯಲ್ಲವೇ ಅಪ್ಪ ಜೀವಿಸುವುದು...... ದೇವರೇ !

"ಮಕ್ಕಳನ್ನು ಮಾತ್ರವೇ ಕೊಲ್ಲುತ್ತಾರೆ..... ಅಲ್ಲವೇ?"

" ಹಣಕ್ಕಾಗಿ ಯಾರನ್ನು ಬೇಕಾದರೂ ಕೊಲ್ಲುತ್ತಾರೆ".....

ಅದು ಕೇಳುವಾಗ ಒಳಗಿನಿಂದಲೇ ಒಂದು ನಡುಕ. ಹೊರಗೆ ತೋರಿಸುತ್ತಿರಲಿಲ್ಲ. ನನ್ನ ದೇವರೇ.... ಅಪ್ಪನ ಕೈಯಲ್ಲಿ ಧಾರಾಳವಾಗಿ ಹಣವಿದೆಯೆಂದು ಜನಗಳು ಹೇಳುತ್ತಾರೆ.

ಆ ಸಮಯದಲ್ಲೇ ತಂತಿ ಬಂದುದು. ಅಪ್ಪ ಊರಿಗೆ ಬರುತ್ತಿದ್ದಾರೆಂಬ ವಾರ್ತೆ.

ವಿಶ್ವ ಯುದ್ಧ ನಡೆಯುವ ಕಾಲ. ಅಪ್ಪ ಕೆಲಸ ಮಾಡುವ ಜಾಗದಲ್ಲೂ ಯುದ್ಧ ಆರಂಭವಾಗಿದೆಯಂತೆ. ಆದ್ದರಿಂದಲೇ ಅಪ್ಪ ತಕ್ಷಣ ಹೊರಡುವ ಯೋಜನೆ ಮಾಡಿದ್ದು. ಪತ್ರಿಕೆಗಳನ್ನು ಓದುವ ದೊಡ್ಡಣ್ಣನಿಗೆ ಯುದ್ಧಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳೂ ಗೊತ್ತು.

ಮನೆಯ ವಾತಾವರಣದಲ್ಲೂ ಅಪ್ಪನ ಆಗಮನದ ವಿಷಯ ಪರಿಣಾಮವನ್ನು ಬೀರಿತು. ತಂದೆ ಬರುತ್ತಾರೆ.... ಆರು ವರ್ಷಗಳ ಬಳಿಕ ನಾನು ನನ್ನ ತಂದೆಯನ್ನು ನೋಡುತ್ತೇನೆ.....!

ಕೊಲೊಂಬೋದಿಂದ ಇಲ್ಲಿಗೆ ತಲಪಲು ಎಷ್ಟು ದಿನ ಬೇಕು ?

ನಾನು ತಿಳಿದುಕೊಂಡೆ. ಮೂರು ಗಂಟೆ ಹಡಗಿನಲ್ಲಿ ಕುಳಿತುಕೊಳ್ಳಬೇಕು. ಆಮೇಲೆ ಎರಡು ದಿನ ರೈಲು ಪ್ರಯಾಣ.

ಹಡಗು ನೀರಿನಲ್ಲಿ ಸಂಚರಿಸುವ ವಾಹನವೆಂದು ಐದನೆಯ ಪಾಠದಲ್ಲಿದೆ. ನೀರ ಮೇಲೆ ಸಂಚರಿಸುವ ವಾಹನಗಳೆಂದರೆ ನನಗೆ ಭಯ. ಭಗವತೀ ದೇವಸ್ಥಾನಕ್ಕೆ ಪೂಜೆಗೆ ಹೋಗುವಾಗ ದೋಣಿಯಲ್ಲಿ ಕುಳಿತುಕೊಳ್ಳಬೇಕು. ಹೆದರಿ ನಡುಗುತ್ತ ನಾನು ದೋಣಿಯಲ್ಲಿ ದಾಟುತ್ತಿದ್ದೆ. ಮಗುಚಬಹುದೋ ಎಂಬ ಭಯ. ದೋಣಿ ಸಂಚರಿಸುವುದು ಹೊಳೆಯಲ್ಲಿ. ಹಡಗು ಸಮುದ್ರದಲ್ಲಿ. ತೆರೆಗಳಿವೆ. ಹಡಗು ಮಗುಚುವುದಿದೆಯೇ ?

ತಂದೆ ಬೇಗನೆ ಬಂದು ಬಿಡಲಿ....

ಅಮ್ಮನ ಲೆಕ್ಕಾಚಾರದಿಂದ ಸೋಮವಾರ ತಂದೆ ತಲಪುತ್ತಾರೆಂದು ನಾನು ನಂಬಿದೆ.

ಶಾಲೆಯಿದ್ದರೂ ಅವತ್ತು ಹೋಗುವುದಿಲ್ಲವೆಂದು ನಿಶ್ಚಯಿಸಿದೆ. ಅಣ್ಣಂದಿರೂ ಹೋಗಲಿಲ್ಲ. ಎಲ್ಲರಿಗೂ ಅಮ್ಮ ರಜೆ ಮಂಜೂರು ಮಾಡಿದ್ದರು ..... ನಿದ್ರೆ ಬರುವ ತನಕವೂ ಮೆಟ್ಟಲು ಕಲ್ಲಿನತ್ತಲೇ ಕಣ್ಣಿಟ್ಟು ಕುಳಿತೆ. ಬರಲಿಲ್ಲ.

ಮರುದಿನ ಬೆಳಗ್ಗೆ ಅಪ್ಪ ಬಂದರು.

ಪತ್ತಾಯದ ಮನೆಯ ಮೇಲಿನಿಂದ ಬಾಲಣ್ಣ ನೋಡಿದ. ಗದ್ದೆಯ ಬದುವಿನ ದಾರಿಯಾಗಿ ಅಪ್ಪ ಬರುತ್ತಿದ್ದರು. ಹಿಂದಿನಿಂದ ದೊಡ್ಡ ಪೆಟ್ಟಿಗೆಗಳೂ, ಅವನ್ನು ಹೊತ್ತುಕೊಂಡ ಆಳುಗಳೂ.

ಒಳಗೆ ಬಂದಕೂಡಲೇ ಅಪ್ಪ ನನ್ನನ್ನು ಬಾಚಿ ತಬ್ಬಿಕೊಂಡರು. ಒಂದು ವಿಷಯ ನಿಜ. ಅಣ್ಣಂದಿರ ಮುಂದೆ ಯಾವತ್ತಾದರೂ ನಾನು ಮಿಗಿಲು ಅಂತ ಆದರೆ ಅದು ಆ ಕ್ಷಣದಲ್ಲಿ....

ಮುಂದಿನದು ಅವರ ಸರದಿ. ಅಪ್ಪ ಒಬ್ಬೊಬ್ಬರನ್ನೂ ಮುಟ್ಟಿ ನೇವರಿಸಿದರು. ಚಡ್ಡಿ ಮೇಲಕ್ಕೇರಿಸುತ್ತ ಸ್ವಲ್ಪ ನಾಚಿಕೊಂಡು ನಿಂತ ನಾನು ಅಪ್ಪನನ್ನು ಚೆನ್ನಾಗಿ ನೋಡಿದೆ.

ಫೋಟೋದಲ್ಲಿರುವುದಕ್ಕಿಂತ ಹೆಚ್ಚು ಕಪ್ಪಾಗಿದ್ದರು. ದಪ್ಪ ಶರೀರ ಒಂದು ಶಾಲನ್ನು ಕುತ್ತಿಗೆಗೆ ಸುತ್ತಿಕೊಂಡಿದ್ದರು.

ಈ ಮಧ್ಯದಲ್ಲಿ ನಾನು ಇನ್ನೊಂದು ಆಶ್ಚರ್ಯವನ್ನೂ ಕಂಡೆ. ಅಪ್ಪನ ಹಿಂದೆ ಒಬ್ಬಳು ಹುಡುಗಿ!

ಬಿಳಿಬಣ್ಣದ, ಉರುಟು ಮುಖದ, ಅರಳಿದ ಕಣ್ಣುಗಳ ಕುತ್ತಿಗೆಯವರೆಗೆ ಇಳಿಬಿಟ್ಟ ಕೆಂಪಾದ ಗುಂಗುರು ಕೂದಲಿನ ಒಬ್ಬಳು ಹೆಣ್ಣುಮಗಳು. ಬಿಳಿಯ ರೇಷ್ಮೆ ಬಟ್ಟೆಯಲ್ಲಿ ಕೆಂಪಾದ ಹೂಗಳಿರುವ ಲಂಗವನ್ನು ಧರಿಸಿದ್ದಳು; ನನಗಿಂತ ಎತ್ತರವಾಗಿ ಕಾಣುತ್ತಿದ್ದಳು.

ತಂದೆ ಅವಳೊಂದಿಗೆ ಏನೋ ಹೇಳಿದರು. ನನಗೆ ಆ ಭಾಷೆ ತಿಳಿಯದು. ಅವಳು ತಲೆಯಾಡಿಸಿದಳು. ಆಮೇಲೆ ಪಜಾರವನ್ನು ಪ್ರವೇಶಿಸಿ ಗಾಬರಿಯಿಂದ ನಿಂತುಬಿಟ್ಟಳು.

ಬಾಗಿಲು, ಕಿಟಕಿಗಳಿಂದ ಉತ್ಕಂಠಿತವಾದ ಕಣ್ಣುಗಳನ್ನು ಕಾಣಬಹುದಾಗಿತ್ತು.

ಆರು ವರ್ಷಗಳ ಬಳಿಕ ಊರಿಗೆ ಬರುವ ಅಪ್ಪನಿಗಿಂತ ಎಲ್ಲರ ಗಮನವನ್ನು ಸೆಳೆದವಳು ಆ ಹುಡುಗಿ.

ಆಳುಗಳು ಪೆಟ್ಟಿಗೆಗಳನ್ನು, ಸಾಮಗ್ರಿಗಳನ್ನೂ ಕೆಳಗಿಳಿಸಿದರು. ರೇಷ್ಮೆಯ ದಾರದಿಂದ ಕಟ್ಟಿದ ಪೆಟ್ಟಿಗೆಗಳು. ಅದರೊಂದಿಗೆ ತಿಳಿನೀಲಿಯ ಬಟ್ಟೆಯಿಂದ ಸುತ್ತಿದ್ದ ಒಂದು ಚರ್ಮದ ಪೆಟ್ಟಿಗೆ. ಅದನ್ನು ನೆಲಕ್ಕಿಳಿಸಿದಾಗ ಆ ಹುಡುಗಿ ಮೆಲ್ಲನೆ ಅದನ್ನು ಒಂದು ಬದಿಗೆ ಜರುಗಿಸಿಟ್ಟಳು.

ಹಜಾರಕ್ಕೆ ಚಹಾ ಬಂತು. ಅಜ್ಜಿ ಕೆಮ್ಮುತ್ತ ಹೊರಗೆ ಬಂದರು. "ಬೆಳಗ್ಗಿನ ರೈಲಿಗೆ ಬಂದೆಯಾ ?"

"ಹೂಂ. ಏನು ರಷ್ಟು..... ಸೆಕೆಂಡ್ ಕ್ಲಾಸಿನಲ್ಲಿ ಕುಳಿತುಕೊಳ್ಳಲೂ ಜಾಗವಿಲ್ಲವೆಂದರೆ?"

ಕಣ್ಣುಜ್ಜಿಕೊಳ್ಳುತ್ತ ತಂದೆ ಹೇಳಿದರು.

"ಕಾಲ ಕೆಟ್ಟು ಹೋಯ್ತು, ಹಿಂದೆಲ್ಲ ಕಾಶಿಗೂ ಕೂಡ ನಡೆದುಕೊಂಡೇ ಜನ ಹೋಗುತ್ತಿದ್ದರು."

"ಎಲ್ಲರೂ ಸಿಲೋನಿನಿಂದ ಬರುವವರೇ. ಬಾಂಬು ಬಿದ್ದಾಗ ತಪ್ಪಿಸಿಕೊಂಡು ಬಂದವರು."

ಅಜ್ಜಿ ಗೋಡೆಯೊರಗಿ ನಿಂತ ಆ ಹೆಣ್ಣು ಮಗಳತ್ತ ನೇರವಾಗಿ ನೋಡಿದರು. ಅವಳಾದರೋ ಭೂಗರ್ಭದಿಂದ ಮೊತ್ತ ಮೊದಲ ಭಾರಿ ಹಗಲನ್ನು ನೋಡಲು ಬಂದ ಅದ್ಭುತ ಜೀವಿಯಂತೆ ನಿಂತಿದ್ದಳು!

ಅಮ್ಮನಿನ್ನೂ ಹಜಾರಕ್ಕೆ ಬಂದಿರಲಿಲ್ಲ. ಕರೆದರೇನೆಂದು ತೋರಿತು. ಆರು ವರ್ಷಗಳ ಬಳಿಕ ತಂದೆ ಬಂದಿದ್ದಾರೆ. ಹಾಗಿರುವಾಗ ಒಮ್ಮೆ ಹೊರಗೆ ಬರಬಾರದೇ?

ಇಡೀ ಮನೆಯೊಳಗೆ ಅರ್ಥಗರ್ಭಿತವಾದ ಒಂದು ಗಾಢಮೌನ ವ್ಯಾಪಿಸಿತ್ತು.

ಅಜ್ಜಿಯೊಂದಿಗೆ ಹೇಳುವ ರೀತಿಯಲ್ಲಿ ಉಳಿದವರೆಲ್ಲರೂ ತಿಳಿಯುವಂತೆ ತಂದೆ ಕೆಲಸದ ಜಾಗದಲ್ಲಿ ಬಾಂಬ್ ಬಿದ್ದ ವಿವರಗಳನ್ನು ಹೇಳಿದರು. ಅವರು ವಾಸಮಾಡುವ ವಠಾರದ ಕೊನೆಯಲ್ಲಿ ಬಾಂಬ್ ಬಿದ್ದಿತಂತೆ. ಒಂದು ದೊಡ್ಡ ಬಟ್ಟೆ ಅಂಗಡಿ ಪೂರ್ತಿ ಸುಟ್ಟು ನಾಶವಾಯ್ತು; ಕಟ್ಟಡಗಳು ಹಲವು ನೆಲಸಮವಾದುವು; ಹಲವರು ಸತ್ತು ಹೋದರು. ಸತ್ತವರ ಪೈಕಿ ತಂದೆಯ ಸ್ನೇಹಿತನೂ ಸೇರಿದ್ದ. ಆತ ಸಿಂಹಳೀಯ. ಅವನ ಮಗಳೇ ತಂದೆಯ ಜತೆಯಲ್ಲಿ ಬಂದ ಹುಡುಗಿ, ಲೀಲ.

ಲೀಲಳಿಗೆ ಸ್ವಂತದವರೆಂದು ಬೇರೆ ಯಾರೂ ಇಲ್ಲ. ಅಮ್ಮ ಸಣ್ಣವಳಿರುವಾಗಲೇ ತೀರಿಹೋಗಿದ್ದಾರೆ. ಅಪ್ಪ ಬಾಂಬ್ ಬಿದ್ದಾಗ. ಇನ್ನೂ ಅಲ್ಲಿ ಬಾಂಬ್ ಬೀಳುವ ಸಾಧ್ಯತೆ ಯಿದೆ. ಆದ್ದರಿಂದ ಅವಳನ್ನು ಕಾಪಾಡಲು ಜತೆಯಲ್ಲಿ ಕರೆತರುವುದಲ್ಲದೆ ಬೇರೆ ಉಪಾಯವಿಲ್ಲ. ನಾನು ತಂದೆ ತಾಯಿಗಳಿಲ್ಲದ ಆ ಬಾಲಕಿಯನ್ನು ನೋಡಿದೆ; ನನಗೆ ತುಂಬ ಬೇಸರವಾಯ್ತು, ಪಾಪ.

ಅವಳು ನೋಡುವುದಕ್ಕೆ ಸುಂದರವಾಗಿದ್ದಳು. ನನ್ನ ಕ್ಲಾಸಿನ ಹುಡುಗಿಯರಿಗಿಂತಲೂ ಚೆನ್ನಾಗಿದ್ದಳು.

ಅಜ್ಜಿ ಅವಳನ್ನು ಒಳಗೆ ಕರೆದರು. ಅವಳಿಗೆ ಅದು ಕೇಳಿಸಿದಂತೆ ತೋರಲಿಲ್ಲ. ಹತ್ತಿರ ಹೋಗಿ ಕೈಹಿಡಿದಾಗ ಒಮ್ಮೆಗೇ ಕಿರುಚಿ ಜೋರಾಗಿ ಕರೆದಳು.

"ಡ್ಯಾಡೀ......

ತಂದೆಯನ್ನು ಸಮೀಪಿಸಿ ಅಜ್ಜಿಯತ್ತ ಬೆರಳು ತೋರಿಸುತ್ತ ಅವಳು ಏನೇನೋ ಕುಲುಕುಲ ಹೇಳಿದಳು.

ಅದು ನನಗೆ ರುಚಿಸಲಿಲ್ಲ. ಅವಳ ಮಾತಲ್ಲ. ತಂದೆಯನ್ನು ಅಂಟಿಕೊಂಡು ನಿಂತ ಆ ನಿಲವು.

ಅಂದು ರಾತ್ರಿ ಅಪ್ಪ ಅಮ್ಮನ ಮಧ್ಯೆ ಗಂಟೆಗಟ್ಟಲೆ ದೀರ್ಘವಾದ ವಾಗ್ವಾದ ನಡೆಯಿತು..... ಅಮ್ಮ ಯಾಕೆ ಅಪ್ಪನೊಂದಿಗೆ ಜಗಳವಾಡುತ್ತಾರೆ?

ನಾನು ಎಣಿಸಿದಂತೆ ಮನೆಯೊಳಗಿನ ವಾತಾವರಣ ಸುಖದಾಯಕವಾಗಿರಲಿಲ್ಲ. ಅಲ್ಲಲ್ಲಿ ಗುಸುಗುಸು ಮಾತುಗಳು ಕೇಳಿಬರುತ್ತಿದ್ದುವು....... ಅಮ್ಮನಿಗೆ ತಿಳಿಯಬಾರದೆಂಬ ಭಾವ. ಈ ಗೊಂದಲಗಳಿಗೆಲ್ಲ ನನಗೆ ತಿಳಿದ ಮಟ್ಟಿಗೆ ಆ ಹುಡುಗಿಯೇ ಕಾರಣ.

ನೆರೆಮನೆಯ ಪಾರು ಅಮ್ಮನೊಂದಿಗೆ ಚಿರಿಯಮ್ಮ ಮೆಲ್ಲ ಹೇಳುತ್ತಿದ್ದರು.

"ನೋಡಿದರೆ ಗೊತ್ತಾಗುವುದಿಲ್ಲವೇ?"

"ಅಲ್ಲವೇ ಮತ್ತೆ?"

"ಅಕ್ಕನಿಗೆ ಕೇಳಿಸುವುದು ಬೇಡ. ಇವಳು ದೊಡ್ಡಮಗಳಂತೆ."

ವಿಷಯ ಹೆಚ್ಚು ಕಡಿಮೆ ನನಗೆ ಅರ್ಥವಾಯ್ತು. ಮನೆಯೊಳಗಿನ ಎಲ್ಲ ಗುಸುಗುಸು ಮಾತುಗಳಲ್ಲಿ ಅಡಗಿರುವ ವಿಷಯ ಒಂದೆ. ಲೀಲ ನಮ್ಮ ತಂದೆಯ ಮಗಳು !

ಅಪ್ಪನ ಮಗಳು! ಹಾಗಿದ್ದರೆ ನನ್ನ ಸೋದರಿ. ನಾನು ಇಷ್ಟು ದಿನ ಭಾವಿಸಿದ್ದು ತಪ್ಪು. ನನಗೂ ಒಬ್ಬ ಸೋದರಿಯಿದ್ದಾಳೆ! ಅದೊಂದು ಒಳ್ಳೆಯ ವಿಚಾರವೆಂಬುದು ನನ್ನ ಅಭಿಪ್ರಾಯ. ಹಾಗಿರುವಾಗ ಮನೆಯೊಳಗಿನ ಪ್ರತಿಯೊಬ್ಬರೂ ಗೊಣಗುತ್ತಿರುವುದೇಕೆ?

ಅವಳು ಮಾತನಾಡುವುದು ನನಗೆ ಅರ್ಥವಾಗುವುದಿಲ್ಲ. ಹಾಗೆಯೇ ಅವಳ ಚುಚ್ಚುವ ನೋಟವೂ. ಆದರೂ ನನಗೆ ಆ ಬಗ್ಗೆ ವಿರೋಧವಿಲ್ಲ. ಅವಳು ನನ್ನ ಸೋದರಿಯಲ್ಲವೇ?

ಅವಳು ನನ್ನ ತಂಗಿಯೋ, ಅಕ್ಕನೋ? ಹೇಳುವುದು ಕಷ್ಟ. ಅಪ್ಪನೊಂದಿಗೆ ಕೇಳಿದರೆ ತಿಳಿಯಬಹುದು. ಆದರೆ ಕೇಳುವುದು ಸಾಧ್ಯವಿಲ್ಲ. ಅವಳು ತಂಗಿಯೇ ಆಗಿರಬೇಕು. ನನ್ನ ಭಾಷೆ ಅವಳಿಗೆ ಅರ್ಥವಾಗಲಾರಂಭಿಸಿದರೆ ನಾನವಳನ್ನು 'ತಂಗೀ' ಎಂದೇ ಕರೆಯುತ್ತೇನೆ.

ತಂಗಿಯೊಂದಿಗೆ ಆತ್ಮೀಯವಾಗಿರಲು ಪ್ರಯತ್ನಿಸಿದರೂ ಅದು ಸಫಲವಾಗಲಿಲ್ಲ. ಅವಳು ಎಲ್ಲರಿಂದಲೂ ದೂರವೇ ಉಳಿದಳು. ಅಪ್ಪನೊಂದಿಗೆ ಮಾತ್ರವೇ ಅವಳು ಮಾತನಾಡುತ್ತಿದ್ದುದು. ಯಾವಾಗಲೂ ಅವಳಿಗೆ 'ಡ್ಯಾಡೀ' ಸಾಕು. 'ಡ್ಯಾಡಿ'ಯೆಂದರೆ 'ಅಪ್ಪ' ಅಂತ ದೊಡ್ಡಣ್ಣ ಹೇಳಿದ. ದೊಡ್ಡಣ್ಣನಿಗೆ ಇಂಗ್ಲೀಷ್ ಗೊತ್ತು.

ಹಗಲಿಡೀ ಅವಳು ಆ ಚರ್ಮದ ಪೆಟ್ಟಿಗೆಯ ಮುಂದೆಯೇ ಆಟವಾಡುತ್ತಿದ್ದಳು. ಬೀಗದ ಕೈಯನ್ನು ಯಾವಾಗಲೂ ತನ್ನ ಹೆಬ್ಬೆರಳಿನಲ್ಲೇ ಸುತ್ತಿಕೊಂಡಿರುತ್ತಿದ್ದಳು. ಪೆಟ್ಟಿಗೆಯ ಬಳಿಗೆ ಯಾರಾದರೂ ಹೋದರೆ ಕೆರಳಿದ ಸರ್ಪದಂತೆ ಭುಸುಗುಟ್ಟುತ್ತಿದ್ದಳು.

ಆ ಪೆಟ್ಟಿಗೆ ತುಂಬ ಉಡುಪುಗಳಿವೆ. ಸೊಗಸಾದ ಚಿತ್ರಗಳಿಂದ ಕೂಡಿದ ಉಡುಪುಗಳು. ತೆರೆದರೆ ಜಿರಲೆಕಾಯಿಯ ವಾಸನೆ ಬರುತ್ತಿತ್ತು. ಮಧುರವಾದ ಇನ್ನೇನೋ ಸುವಾಸನೆ.

ಎರಡು ದಿನಗಳಾದ ಮೇಲೆಯೇ ನಾನು ಆ ರಬ್ಬರ್ ಗೂಬೆಯನ್ನು ನೋಡಿದ್ದು. ಅವಳು ಪೆಟ್ಟಿಗೆ ತೆರೆವಾಗ ಅವಳ ಹಿಂಭಾಗದಿಂದ ಮೆಲ್ಲನೆ ಇಣುಕಿನೋಡಿದಾಗ ಅದು ಕಾಣಿಸಿತು. ಬಟ್ಟೆಗಳ ಮಧ್ಯೆ ಸುಂದರವಾದ ಒಂದು ರಬ್ಬರ್ ಗೂಬೆ.

"ಅದೇನು?"

ಕುತೂಹಲ ತಡೆಯಲಾಗಲಿಲ್ಲ.

ಅವಳು ಕಣ್ಣುಗಳನ್ನು ಕಿರಿದಾಗಿಸಿ ತಾತ್ಸಾರ ಭಾವದಿಂದ ನನ್ನತ್ತ ನೋಡಿದಳು. ನಾನು ಹೇಳಿದ್ದು ಅರ್ಥವಾಗಿರಲಾರದು.

"ಅದೆ.. ಆ ... ಆ... ಕಾಣಿಸುತ್ತಿರುವುದು?"

ನಾನು ಬೆರಳು ತೋರಿಸಿದೆ.

ಅವಳು ಆ ರಬ್ಬರ್ ಗೂಬೆಯನ್ನು ಹೊರಗೆ ತೆಗೆದಳು. ಅದರ ಸೌಂದರ್ಯವನ್ನು ತಾನೇ ಒಮ್ಮೆ ಆಸ್ವಾದಿಸಿಕೊಂಡು ನನ್ನತ್ತ ನೋಡಿದಳು. ಅವಳ ಸಪೂರವಾದ ಬೆರಳುಗಳು ಅದರ ಹಿಂಭಾಗಕ್ಕೆ ಚಲಿಸಿದುವು. ಗೂಬೆಯ ನೀಲಿಕಣ್ಣುಗಳು ಮಿನುಗಿದುವು.......!

"ಒಮ್ಮೆ ನೋಡಿಕೊಡಲೇ....?"

ನಾನು ಸಂಕೋಚಪಟ್ಟುಕೊಂಡೇ ಕೇಳಿದೆ. ಯಾರಾದರೂ ಕೇಳಿಸಿಕೊಂಡರೆ ತಮಾಷೆ ಮಾಡಿಯಾರೆಂಬ ಭಯವೂ ಇತ್ತು.

ಪುನಃ ಅದೇ ತಾತ್ಸಾರ ಭಾವದಿಂದ ಅವಳು ನನ್ನ ಕಡೆ ನೋಡಿದಳು. ಆಮೇಲೆ ಮೆಲ್ಲನೇ ಆ ರಬ್ಬರ್ ಗೂಬೆಯನ್ನು ಪೆಟ್ಟಿಗೆಯೊಳಗೇ ಇಟ್ಟು ಭದ್ರವಾಗಿ ಬೀಗ ಹಾಕಿದಳು. ನಾನು ಪೆಚ್ಚಾದೆ. ನನ್ನ ತಂದೆಯ ಮಗಳಾಗಿದ್ದರೂ ಅವಳು ಖಂಡಿತ ಜಂಬಗಾತಿ.

ನನಗೆ ಆ ರಬ್ಬರ್ ಗೂಬೆಯ ಮೇಲೆ ಆಸೆಯಾಗಿದೆಯೆಂದು ಅವಳಿಗೆ ಅರ್ಥವಾಗಿರಬೇಕು. ಇಲ್ಲವಾದರೆ ಆಗಾಗ್ಗ ಪೆಟ್ಟಿಗೆಯನ್ನು ತೆರೆದು ಅದನ್ನು ಹೊರಗೆ ಕಾಣಿಸುತ್ತ ನನ್ನಲ್ಲಿನ ಬಯಕೆಯನ್ನು ಕೆರಳಿಸುವುದು ಯಾಕೆ?

ಅವಳ ಜಂಬ ನನಗೆ ಬೇಕಿಲ್ಲ. ಅಪ್ಪನಲ್ಲಿ ಹೇಳಿದರೆ ನನಗೂ ಅಂಥದೊಂದನ್ನು ತಂದುಕೊಡದಿರಲಾರರು. ಅಂಥದೊಂದು ನನಗೂ ಸಿಕ್ಕುತ್ತಿದ್ದರೆ ಕ್ಲಾಸಿಗೆ ತೆಗೆದುಕೊಂಡು ಹೋಗಿ ಸಹಪಾಠಿಗಳ ಮುಂದೆ ಅದರ ಕಣ್ಣುಗಳನ್ನು ಆಡಿಸಬಹುದಿತ್ತು. ಹೊಟ್ಟೆ ತೆರೆಯಬಹುದಿತ್ತು.

ಅಪ್ಪನೊಂದಿಗೆ ಹೇಳಿದರೇನು?

ಆದರೆ ಅಪ್ಪನ ಬಳಿಗೆ ಹೋಗಲು ಮಾತ್ರ ನನಗೆ ತುಸು ಕಷ್ಟವೆನಿಸುತ್ತಿತ್ತು. ಕಾರಣವೇನಿಲ್ಲ. ಅವಳ ಹಾಗೆ 'ಡ್ಯಾಡೀ' ಅಂತ ಕರೆದು ಓಡಿಹೋಗಿ ಮಡಿಲೇರಿ ಕುಳಿತುಕೊಳ್ಳುವ ಧೈರ್ಯವಿಲ್ಲ.

ತಂದೆ ಹೆಚ್ಚು ಮಾತನಾಡುತ್ತಿರಲಿಲ್ಲ. ಅವರು ಆರಾಮಕುರ್ಚಿಯಲ್ಲಿ ಮಲಗಿರುವಾಗ ದೂರದಿಂದ ನಾನು ಕಣ್ಣು ಹಾಯಿಸುತ್ತಿದ್ದೆ. ದಪ್ಪ ಫ್ರೇಮುಗಳುಳ್ಳ ಆ ಕನ್ನಡಕದ ಮುಖವನ್ನು ತಿರುಗಿಸುವಾಗ ಅದು ಪ್ರಕಾಶಿಸುವುದನ್ನು ನೋಡುವುದಕ್ಕೆ ಖುಷಿಯಾಗುತ್ತಿತ್ತು.

ಒಮ್ಮೆ ಧೈರ್ಯ ಮಾಡಿ ಕೇಳಲೇಬೇಕೆಂದು ತೀರ್ಮಾನಿಸಿದೆ. ಲೀಲಳ ಮುಂದೆ ಅವಮಾನಿತನಾಗಬಾರದಲ್ಲ. ಹತ್ತಿರ ಹೋಗಿ ನಿಂತಾಗ ತಂದೆ ಕೇಳಿದರು.

ಮುಖ ಮೇಲೆತ್ತಿದ್ದಾಗ ಕನ್ನಡಕ ಹೊಳೆಯಿತು.

ನನಗೆ ಏನು ಹೇಳಲೂ ಸಾಧ್ಯವಾಗಲಿಲ್ಲ. ನನ್ನ ಕುರುಚಲು ಕೂದಲಲ್ಲಿ ಕೈಯಾಡಿಸುತ್ತ ಅಪ್ಪ ಕೇಳಿದರು.

'ಸ್ಕೂಲಿಗೆ ಹೋಗುವುದಿಲ್ಲವೇ?'

'ಹೂಂ.'

ಇನ್ನೇನೂ ಕೇಳಲಿಲ್ಲ. ಏನನ್ನೂ ಹೇಳಲು ನನಗೆ ಸಾಧ್ಯವಾಗಲಿಲ್ಲ.

ರಬ್ಬರ್ ಗೂಬೆಯಿಲ್ಲದಿದ್ದರೆ ಹೋಗಲಿ. ಕ್ಲಾಸಿನಲ್ಲಿ ಹುಡುಗರೆಲ್ಲ ಸುಮ್ಮನೆ ನನ್ನನ್ನು ನೋಯಿಸುತ್ತಿರುವುದೇಕೆ ?

ತಂದೆ ಬಂದುದೂ ಜತೆಯಲ್ಲಿ ಒಬ್ಬಳು ಹುಡುಗಿಯನ್ನು ಕರೆತಂದುದೂ ಊರವರಿಗೆ ಎಷ್ಟು ಬೇಗ ಗೊತ್ತಾಯಿತು! ನಮ್ಮ ಮನೆಯಲ್ಲಿ ಒಬ್ಬಳು ಹುಡುಗಿ ಬಂದಿರುವುದನ್ನು ಸಹಿಸಿಕೊಳ್ಳಲಾಗದೆ ಹೋದರು ನಮ್ಮ ಕ್ಲಾಸಿನ ಭಾನುವಿಗೆ.

ನಾನು ಕೇಳುವಂತೆಯೇ ಅವಳು ಹೇಳುತ್ತಿದ್ದಳು.

'ಈ ಹುಡುಗನ ತಂದೆ ಬರುವಾಗ ಒಬ್ಬಳು ಹುಡುಗಿಯನ್ನು ಕರೆತಂದಿದ್ದಾರೆ.'

'ಎಲ್ಲಿಂದ?'

"ಕೊಲೊಂಬೋದಿಂದ. ಮತ್ತೇ..... ಅಮ್ಮ ಹೇಳ್ತಾರೆ, ಈ ಹುಡುಗನ ತಂದೆಗೆ ಅಲ್ಲಿ ಹೆಂಡತಿ, ಮಕ್ಕಳೆಲ್ಲ ಇದ್ದಾರಂತೆ".

"ಥೂ.. ಎಂಥ ಹೊಲಸು ಮಾತು, ಆ ಹಾದರಗಿತ್ತಿಯ ಕಪಾಳಕ್ಕೆ ಚೆನ್ನಾಗಿ ಬಾರಿಸಿದರೇನೆಂದು ತೋರಿತು. ಆದರೆ ಬಾರಿಸಲಿಲ್ಲ. ಅವಳು ನನಗೆ ಸಿಹಿತಿಂಡಿ ಕೊಟ್ಟಿದ್ದಾಳಲ್ಲ."

ಆದರೂ ಅವಳು ಹೇಳಿದ್ದು ಅಕ್ಷಮ್ಯ, ನನ್ನ ತಂದೆಯ ಬಗ್ಗೆ ಅವಳು ಆಡಿದ ಮಾತುಗಳು...

ತಂದೆ ಕೊಲೊಂಬೋದಲ್ಲಿ... ಛೆ... ಅದು ಸುಳ್ಳು! ಅವಳ ಅಮ್ಮನಿಗಲ್ಲವೇ ಆ ವಿಷಯ ಸಿಕ್ಕಿದ್ದು! ಅವಳ ಅಮ್ಮ, ಅಜ್ಜ ಎಲ್ಲರೂ ನಂಬರ್ ಒನ್ ಸುಳ್ಳುಗಾರ್ತಿಯರು.....

ಅವಳ ಮಾತು ನನ್ನನ್ನು ನೋಯಿಸಿತು. ಸಂಶಯ ನಿವಾರಣೆಗಾಗಿ ಸಂಜೆ ಕೊಳದಿಂದ ಹಿಂತಿರುಗುವಾಗ ಅಮ್ಮನಲ್ಲಿ ಕೇಳಿದೆ. 'ಅಮ್ಮ, ನಮ್ಮ ಕ್ಲಾಸಿನ ಭಾನು ಹೇಳುತ್ತಾಳೆ......'

'ಏನು?'

'ಅಪ್ಪ ..... ಅಪ್ಪನಿಗೆ ಕೊಲಂಬೋದಲ್ಲಿ ಹೆಂಡತಿ, ಮಕ್ಕಳು ಇದ್ದಾರಂತೆ.....?"

ನಾನು ಭಾನುವಿಗೆ ಕೊಡಬೇಕೆಂದು ಭಾವಿಸಿದ ಏಟು ಸಿಕ್ಕಿದ್ದು ನನಗೆ.

"ನಿನ್ನ ತಂದೆಯಲ್ಲೇ ಕೇಳು..."

ಇಂಥ ಮಾತುಗಳನ್ನು ಯಾರು ಹೇಳಿದರೂ ನಂಬುವುದಿಲ್ಲವೆಂದು ನಿಶ್ಚಯಿಸಿದೆ. ಯಾರಲ್ಲೂ ಏನೂ ಕೇಳುವುದೂ ಇಲ್ಲ.

ತಂದೆ ಬಂದ ಆರನೆಯ ದಿನ ರಾತ್ರಿಯಲ್ಲಿ ಆ ಘಟನೆ ನಡೆಯಿತು.

ತಂದೆ ಮಲಗುವ ಕೋಣೆಯ ಪಕ್ಕದ ಕೊಠಡಿಯಲ್ಲಿ ನಾನು ಮಲಗುವುದು. ಊಟ ಮುಗಿಸಿ ಮಲಗಲು ಹೊರಟ ತಂದೆಯ ದೇಹಕ್ಕೆ ತಾಗಿ ಲೀಲ ನಿಂತಿದ್ದಳು. ಮಾತನಾಡುತ್ತಿದ್ದಳು.... ಕೋಣೆಯೊಳಗಿನಿಂದ ಸಿಗರೇಟಿನ ವಾಸನೆ ಬರುತ್ತಿತ್ತು.

ನಾನು ಅದನ್ನು ನೋಡದಂತೆ ನಟಿಸಿದೆ. ಅಪ್ಪನಿಗೆ ಅಷ್ಟು ಸಮೀಪದಲ್ಲಿ ನಿಂತು ಹಾಗೆ ಒಮ್ಮೆಯೂ ನಾನು ಮಾತನಾಡಿರಲಿಲ್ಲ. ನನಗೆ ಅಸೂಯೆಯೆನಿಸಿತು. ನಾನು ಬಹಳ ಅದೃಷ್ಟಹೀನಳೆಂಬ ಅರಿವುಂಟಾಯ್ತು. ಸುವಾಸನೆಯನ್ನು ಬೀರುತ್ತಿರುವ ಸೊಗಸಾದ ಉಡುಗೆಗಳೂ, ರಬ್ಬರ್ ಗೊಂಬೆಯೂ, ನೋಡಲು ಸುಂದರವಾದ ಮುಖವೂ ನನಗಿಲ್ಲ. ನನ್ನ ಗುಂಡಿಯಿಲ್ಲದ ಚಡ್ಡಿಯಲ್ಲಿ ಕೊಳೆ, ಕೆಸರುಗಳೇ ಹೆಚ್ಚಾಗಿದ್ದುವು. ಅದರಿಂದಲೇ ಇರಬೇಕು, ತಂದೆ ನನ್ನನ್ನು ಹತ್ತಿರ ನಿಲ್ಲಿಸಿ ಮಾತನಾಡದಿರುವುದು.

ನನಗೆ ಅಳಬೇಕೆನಿಸಿತು. ಹಾಸುಗೆಯಲ್ಲಿ ಮುಖ ಮುಚ್ಚಿಕೊಂಡು ನಾನು ಅಲುಗಾಡದೆ ಮಲಗಿದೆ.....

'ವಾಸೂ.....'

ತಂದೆ ಕರೆದರು

'ಏನು?'

'ಬಾ... ಇಲ್ಲಿ ಬಾ....'

ನಾನು ಮೆಲ್ಲನೆ ಆ ಕೋಣೆಗೆ ಹೋದೆ. ಅಪ್ಪನ ಹೆಗಲನ್ನು ಹಿಡಿದು ನಿಂತಿರುವ ಲೀಲಳನ್ನು ನೇರವಾಗಿ ದಿಟ್ಟಿಸುವ ಧೈರ್ಯವಾಗಲಿಲ್ಲ.

'ಬಾ... ಮಗೂ!'

ತಂದೆ ನನ್ನನ್ನು ಶರೀರಕ್ಕೆ ಒತ್ತಿಕೊಂಡು ನನ್ನ ತಲೆಕೂದಲಲ್ಲಿ ಕೈಯಾಡಿಸುತ್ತ ಲೀಲಳೊಂದಿಗೆ ಏನೋ ಹೇಳಿದರು.

ಆ ಭಾಷೆ ನನಗೆ ಇವತ್ತಿಗೂ ಗೊತ್ತಿಲ್ಲ. ಆದರೆ ಅದರ ಅರ್ಥ ಇವತ್ತು ನನಗಾಗುತ್ತದೆ.

'ಮಗಳೇ, ಇವನು ನಿನ್ನ ಸೋದರ.....'

ದುಃಖದಿಂದಲೇ ನಾನಿವತ್ತು ಅದನ್ನು ನೆನಪಿಸುತ್ತೇನೆ.

ಆ ದಿನ ಕುಟುಂಬದೊಳಗೆ ಒಂದು ಬಿರುಗಾಳಿ ಬೀಸಿತ್ತು. ಕಳೆದ ಆರುದಿನಗಳಿಂದ ಅದು ರೂಪಧಾರಣೆ ಮಾಡುತ್ತಿತ್ತೆಂಬುದು ಆಗಷ್ಟೆ ನನಗೆ ಅರಿವಾಯ್ತು. ಅಪ್ಪ, ಅಮ್ಮ ಪರಸ್ಪರ ಜಗಳ ಕಾದರು. ಮನೆಯವರು ಯಾರೂ ಸೇರಲಿಲ್ಲ. ಮಾತುಗಳಲ್ಲಿ ಮೊನಚು, ರೋಷಾವೇಶಗಳು ಹರಿದುಬಂದುವು. ತಂದೆ ಆದಷ್ಟೂ ಶಾಂತರಾಗಿರಲು ಪ್ರಯತ್ನಿಸಿದರು.

'ನೀನು ಸುಮ್ಮನೆ ತಪ್ಪು ಕಲ್ಪನೆ ಮಾಡುತ್ತೀ'

'ನನಗೇನೂ ಕೇಳಬೇಕಾಗಿಲ್ಲ. ನನಗೆಲ್ಲವೂ ಅರಿವಾಗಿದೆ'

'ಏನು ನಿನಗೆ ಅರಿವಾಗಿರುವುದು?'

'ನನ್ನಿಂದ ಏನೂ ಹೇಳಿಸಬೇಡಿ. ಮಾಧವ ನನಗೆಲ್ಲವನ್ನೂ ಬರೆದು ತಿಳಿಸಿದಾನೆ.'

ಮಾಧವ ಯಾರೆಂದು ನನಗೆ ಗೊತ್ತು. ತಂದೆಯ ಕೆಲಸ ಮಾಡುವ ಜಾಗದ ಹತ್ತಿರವೇ ಮಾಧವ ಮಾಮನೂ ಇರುವುದು. ಆತ ತಾಯಿಯ ಸೋದರ.

ಆಮೇಲೆ ತಂದೆ ವಾದಿಸಲಿಲ್ಲ. ತಾಯಿ ಹಾರಾಡಿದರು. ಬೆಂಕಿಕಾರುವ ಮಾತುಗಳು.....

ನಾನು ಮುಖವನ್ನು ಮುಚ್ಚಿ ಮಲಗಿದೆ. ಎದೆಯೊಳಗೆ ದುಃಖ ಉಕ್ಕೇರುತ್ತಿತ್ತು. ಆರ್ತನಾಗಿ ಪ್ರಾರ್ಥಿಸಿದೆ.

"ಭಗವತೀ... ಏನೂ ಆಗದಿರಲಿ..."

ಮೇಜಿನ ಮೇಲಿದ್ದ ಗಾಜಿನ ಲೋಟಗಳು ಪುಡಿಪುಡಿಯಾದವು.

ನಾನು ಕಿವಿಗಳನ್ನು ಮುಚ್ಚಿಕೊಂಡೆ.

ತಲೆದಿಂಬಿನ ಮೇಲೆ ಕಣ್ಣೀರ ಬಿಂದುಗಳು ಉರುಳ ತೊಡಗಿದುವು.

"ದೇವರೇ..."

ಸ್ವಲ್ಪ ಹೊತ್ತಾದ ಮೇಲೆ ಕೋಣೆಯಿಂದ ಹೊರಟು ಹೋಗುವುದು ಕಾಣಿಸಿತು. ಒತ್ತಿಹಿಡಿದ ಬಿಕ್ಕಳಿಕೆಯೊಂದಿಗೆ........

ಮರುದಿನ ಸೂರ್ಯೋದಯದ ವೇಳೆ ನನಗೆ ಎಚ್ಚರವಾದಾಗ ಅಪ್ಪನೂ, ಲೀಲಳೂ ಪ್ರಯಾಣಕ್ಕೆ ಸಿದ್ಧರಾಗಿರುವುದನ್ನು ಕಂಡೆ, ಕೋಣೆಯಲ್ಲಿ ಪೆಟ್ಟಿಗೆಗಳನ್ನೆಲ್ಲ ಜೋಡಿಸಿಟ್ಟಿದ್ದರು.

"ಅಪ್ಪ ಎಲ್ಲಿಗೆ ಹೋಗುತ್ತಾರೆ?"

ನಾನು ಅಣ್ಣನೊಂದಿಗೆ ಮೆಲ್ಲನೆ ಕೇಳಿದೆ.

"ಯಾರಿಗ್ಗೊತ್ತು?" ಅಣ್ಣ ಕೋಪದಿಂದ ಉತ್ತರಿಸಿದ.

ನನಗೆ ನೋವಾಗಿತ್ತು. ನಾನು ಯೋಚಿಸಿದೆ. "ಇಲ್ಲಿರುವವರಿಗೆಲ್ಲ ಏನಾಗಿದೆ?"

ಅಪ್ಪ ಮೊದಲು ಅಜ್ಜಿಗೆ ಮತ್ತೆ ನಮಗೆ ಪ್ರಯಾಣದ ವಿಚಾರ ತಿಳಿಸಿದರು.

ಅಣ್ಣನೂ, ಬಾಲಣ್ಣನೂ ಕಣ್ಣೊರಸಿದರು.

ಅಪ್ಪನಿಗೆ ಅದು ಕಾಣಿಸಲಿಲ್ಲವೆಂದು ತೋರುತ್ತದೆ. ಅವರು ಅಂಗಳಕ್ಕಿಳಿದು ದೊಡ್ಡದೊಂದು ಕೊಡೆಯನ್ನು ಕಂಕುಳಿಗೇರಿಸಿ ಕರೆದರು.

"ಲೀಲಾ......"

"ದಾದೀ......"

ಅವಳು ಪ್ರಯಾಣಕ್ಕೆ ಸಿದ್ಧಳಾದವಳಂತೆ ಹೊರಗೆ ಬಂದಳು. ದೊಡ್ಡ ಸೂರ್ಯಕಾಂತಿ ಹೂಗಳಿರುವ ಲಂಗವನ್ನು ಉಟ್ಟುಕೊಂಡಿದ್ದಳು. ಸೊಂಟದಲ್ಲಿ ನೀಲಿ ಬಣ್ಣದ ರೇಷ್ಮೆದಾರದಿಂದ ಕಟ್ಟಿದ ಒಂದು ಗಂಟು - ಕೈಯಲ್ಲಿ ಆ ರಬ್ಬರ್ ಗೊಂಬೆ.

ಜಗಲಿಯ ಕಂಬಕ್ಕೊರಗಿ ನಿಂತ ನನ್ನನ್ನು ನೋಡಿ ಅವಳು ಮುಗುಳ್ನಕ್ಕಳು. ನಾನು ನಗಲಿಲ್ಲ. ಹತ್ತಿರ ಬಂದು ನನ್ನ ಕೈಯಲ್ಲಿ ಆ ರಬ್ಬರ್ ಗೊಂಬೆಯನ್ನಿಟ್ಟಳು. ನಾನು ಅಚ್ಚರಿಯಿಂದ ಸ್ತಂಭಿತನಾದೆ. ಇನ್ನೊಮ್ಮೆ ಮಂದಹಾಸ ಬೀರುತ್ತ ಮೆಲ್ಲನೆ ಏನನ್ನೋ ಉಸುರುತ್ತ ಅವಳು ತನ್ನ ಪುಟ್ಟಕೊಡೆಯನ್ನು ಕುಲುಕಿಸುತ್ತ ಅಂಗಳಕ್ಕಿಳಿದಳು.

ಅಪ್ಪ ಮುಂದೆ ಲೀಲ ಹಿಂದೆ ಹೊರಟು ಮೆಟ್ಟಲುಗಳನ್ನು ದಾಟಿದರು... ದೀರ್ಘವಾದ ಹಾದಿಯಲ್ಲಿ ನಡೆದು ಸಾಗುತ್ತ ಅವರು ದೂರವಾಗುತ್ತಿದ್ದರು. ಅವರು ಹೊರಟೇ ಹೋಗುತ್ತಿದ್ದಾರೆಯೇ?

ಆ ಸೂರ್ಯಕಾಂತಿ ಹೂಗಳೂ, ನೀಲಿಬಣ್ಣದ ರೇಷ್ಮೆಬಣ್ಣದ ರೇಷ್ಮೆದಾರವೂ ದೂರವಾಗುತ್ತ ನೋಟಕ್ಕೆ ಎಟುಕದಾದುವು.

ಹನ್ನೆರಡು ವರ್ಷಗಳ ಬಳಿಕ ನನಗಿಂದು ಲೀಲಳ ನೆನಪಾಯ್ತು.

ಪ್ರೀತಿಯ ಸೋದರೀ.. ನೂರಾರು ಮೈಲಿ ದೂರದಿಂದ ನಾನು ನಿನಗೆ ಶುಭಕೋರುತ್ತೇನೆ....

ನಿನ್ನ ನೆನಪಿಗಾಗಿ ನಾನಿದನ್ನು ಬರೆದೇ ತೀರುತ್ತೇನೆ.

□

# ಮೊದಲಿಗರು ನಾವು

ಮೂಲ : ಅಮೆರಿಕನ್ ಮೂಲನಿವಾಸಿ ಕವಿತೆ
ಅನು : ಮಾನಸ ವೆಂಕಟಸುಬ್ಬಯ್ಯ

ಯುಗ ಯುಗಗಳಿಂದ
ಈ ನೆಲದಲ್ಲಿ ಹರಡಿದ್ದ
ಮೂಲಪುರುಷರ ಕುಲದವ
ನಾನೆಂಬ ಹೆಮ್ಮೆ ನನಗೆ.

ಸಾಗರ ತಂದು ಬಿಸುಟ
ಅಲೆಮಾರಿ, ಯಾವನೋ-
ಹುಂಬ, ಎಲ್ಲಿಯವನೋ-
ಕರೆದನೆಂದಾಕ್ಷಣ
ನಾವಾದೆವೇ "ಇಂಡಿಯನ್ನರು?"

ಹೇಳುವೆಯಾ ನಮ್ಮ ಇತಿಹಾಸದ ಕಥೆಯ?
ಒದ್ದೆಯಾದ ಕಣ್ಣಂಚಿನಲಿ ಇಣುಕುವುದು
ಕಳೆದುಹೋದ ಸುಖಜೀವನದ ಬಿಂಬ
ಒಡನೆಯೇ ತರುವುದು ವಿಷಾದದ ನಗೆಯ.

ಸಾರುತಿವೆ ಮೂಕ ರಣಭೇರಿಗಳು
ನಮ್ಮ ವಿಜಯೋತ್ಸವದ ಕಥೆಯ
ಹಿಂಬಾಲಿಸುತಿದೆ ಸ್ವಪ್ನ ಲೋಕವು
ಕೊಳಲಿನ ಪ್ರತಿ ಅಲೆಯ.

ಕುತ್ತಾಯ್ತು ಅವರಿಗೆ ನಮ್ಮ ಶಾಂತಿಯ ಬಾಳ್ವೆ
ನಮ್ಮ ತರಿದುದು ನಮ್ಮ ರಕ್ಷಿಸಲಂತೆ!
ಕೆಚ್ಚೆದೆಯ ನಮ್ಮ ಹೋರಾಟ ಬರ್ಬರವಾದುದಂತೆ!
ಮೈಗಳ್ಳರಂತೆ ನಾವು ಏಕೆ?
ಅವರಂತೆ ಅನ್ಯರ ಕೊಳ್ಳೆಹೊಡೆಯಲಿಲ್ಲವೆಂದೆ?

ಒಂದು ಪ್ರಶ್ನೆ-ತಪ್ಪೆಲ್ಲ ನಮ್ಮದಾದರೆ
ಸಾಗಿತು ಹೇಗು ನಮ್ಮ ಶತಮಾನಗಳ
ಸುಖಬಾಳ್ವೆ ಅವರ ಹಂಗಿಲ್ಲದೆಯೆ?

(ಮೊದಲಿಗರು ನಾವು: ಈ ಕವನವನ್ನು ಅಮೇರಿಕದ ಮೂಲ ನಿವಾಸಿಗಳ ಸಾಹಿತ್ಯ ಭಂಡಾರದಿಂದ ಆಯ್ದುಕೊಂಡದ್ದು. ನೂರಾರು ವರ್ಷಗಳ ಹಿಂದೆ ರಚಿತವಾದ ಇದರ ಒಡೆತನದ ಹಕ್ಕನ್ನು ಸುಮಾರು ಪಂಗಡಗಳು ಸಾಧಿಸಿದ್ದರೂ ಇದರ ಮೂಲ ಕರ್ತೃ ಯಾರೆಂದು ತಿಳಿದಿಲ್ಲ.)

Manasa V. 4859, More avenue
Pleasanton, California - 94566, U.S.A.

# ಕನ್ನಡವು ಅಂತಾರಾಷ್ಟ್ರೀಯ ಜಾಲದ ಸದಸ್ಯ ಭಾಷೆಯಾಗಿ ಕನ್ನಡಿಸುತಿರಲಿ

ಸುಗತ ಶ್ರೀನಿವಾಸರಾಜು

ತಾಯ್ನುಡಿಯ ಮಾತಿಗೆ ಬಂದರೆ ನಮ್ಮ ನಾಡಿನಲ್ಲೇ ನಾವು ವಲಸೆಗಾರರು. ದಿನಕಳೆದಂತೆ ನಮ್ಮ ನುಡಿಯ ಸೂಕ್ಷ್ಮಗಳಿಗೆ ಮಿಡಿತಗಳಿಗೆ ನಾವು ಕಿವುಡರಾಗುತ್ತಿದ್ದೇವೆ. ಅದು ನಮ್ಮ ಚಟುವಟಿಕೆಯ ಬದುಕಿನಿಂದ ದೂರ ಸರಿಯುತ್ತಿದೆ.

ಕಾಶ್ಮೀರಿ ೫೬,೬೯೩(೧೯೯೧) ಜನರ ತಾಯ್ನುಡಿ. ಪತ್ರಿಕೆಯೊಂದು ಈಚೆಗೆ ಈ ನುಡಿಯ ಶಾರದ ಲಿಪಿಯ ಅವಸಾನದ ವಿಷಯ ಸೂಚಿಸಿತ್ತು. ಈ ಲಿಪಿಯಿಂದಾಗಿಯೇ ಕಾಶ್ಮೀರಕ್ಕೆ ಶಾರದ ದೇಶವೆಂಬ ಹೆಸರಿತ್ತು. ಜಾತಕ, ಕುಂಡಲಿಗಳನ್ನು ಕೆಲವು ದಶಕಗಳ ಹಿಂದಿನವರೆಗೂ ಈ ಲಿಪಿಯಲ್ಲಿ ಬರೆಯುತ್ತಿದ್ದರು. ಈಗ ಬಹುಪಾಲು ಕಾಶ್ಮೀರಿಗಳು ಉರ್ದು ಇಲ್ಲವೇ ದೇವನಾಗರಿಯನ್ನು ಬಳಸುತ್ತಾರೆ. ಕಾಶ್ಮೀರಿ ಪಂಡಿತರು ಹೆಚ್ಚಿನ ಪ್ರಮಾಣದಲ್ಲಿ ದೇಶ ತೊರೆದ ಕಾರಣ ಈ ಲಿಪಿ ನಾಶವಾಯಿತೆನ್ನುತ್ತಾರೆ. ಈ ಲಿಪಿಯನ್ನು ಓದಬಲ್ಲ ಕೊನೆಯ ವ್ಯಕ್ತಿ ಶ್ರೀನಗರ ವಿಶ್ವವಿದ್ಯಾಲಯದಿಂದ ನಿವೃತ್ತನಾಗಿಯೇ ಮೂವತ್ತು ವರ್ಷ ಕಳೆದಿವೆ.

ನಮ್ಮ ನುಡಿಯ ಮೊದಲ ಲಿಖಿತ ದಾಖಲೆ ಕವಿರಾಜಮಾರ್ಗದ ಹೊತ್ತಿಗೆ, ಒಂಬತ್ತನೇ ಶತಮಾನದಲ್ಲಿ. ಶಾರದ ಲಿಪಿ ಬಳಕೆಯಲ್ಲಿತ್ತು. ನಮ್ಮ ಲಿಪಿಯೂ ಒಂದು ದಿನ ಶಾರದ ಲಿಪಿಯ ಹಾಗೆ ಬಳಕೆಯಿಂದ ದೂರಾದರೆ ಕನ್ನಡದ ವಿಕಲತೆಯ ಸ್ಥಿತಿಯನ್ನು ಊಹಿಸಲು ಸಾಧ್ಯವೇ? ಅಥವಾ ಮನೆಯ ಗೋಡೆಗಳ ಒಳಗೆ ಮಾತ್ರ ಕನ್ನಡ ಬಳಸುವ ಗತಿ ಬಂದೊದಗಿದರೆ !

ಇವೆಲ್ಲ ಕಪೋಲ ಕಲ್ಪಿತಗಳಲ್ಲ. ನಾರಾಯಣಮೂರ್ತಿ ತರಹದ ಸಾಫ್ಟ್‌ವೇರ್ ದೊರೆಗಳು, ಹೆಚ್ಚೆಚ್ಚು ಹಣಗಳಿಸುವ ಕನ್ನಡ ಮತ್ತಿತರ ಭಾಷೆಗಳನ್ನು ಬಲಿಗೊಡುವ, ಇಂಗ್ಲಿಷ್ ಭಾಷೆಯನ್ನು ಸಂಪೂರ್ಣವಾಗಿ ಸ್ವೀಕರಿಸುವ ಮಾತನ್ನು ಕೆಲವು ವರ್ಷಗಳ ಹಿಂದೆ ಆಡಿದ್ದನ್ನು ನೆನಪು ಮಾಡಿಕೊಳ್ಳಿ. ತಾವು ಯಾವ ಪರಂಪರೆಯ ಭಾಗವಾಗಿದ್ದಾರೋ, ಆ ಭಾಷಾ ಪರಂಪರೆಗೆ ಸಾವಿರ ವರ್ಷಗಳಿಗೂ ಮಿಕ್ಕಿದ ಚರಿತ್ರೆಯಿದೆ ಎಂಬುದು ಅವರಿಗೆ ಒಮ್ಮೆಯೂ ತೋರಲಿಲ್ಲ. ಸಾಫ್ಟ್‌ವೇರ್ ತಂತ್ರಜ್ಞಾನದಲ್ಲಿ ಚೀನಿಯರನ್ನು ಬಗ್ಗು ಬಡಿಯುವುದಷ್ಟೇ ತಮ್ಮ ಮುಖ್ಯ ಗುರಿಯೆಂದು ಸದಾ ಹೇಳುತ್ತಿದ್ದಾರೆ. ಆದರೆ ಚೀನಿಯರು ಹಾಗೆ ತಿಳಿದಿಲ್ಲ. ಚೀನ ಭಾಷೆಯಲ್ಲಿ ಗಣಕ ಕಾರ್ಯವಾಹಿಯನ್ನು ರೂಪಿಸಲು ಗುರಿಯುಳ್ಳ ಯೋಜನೆಯೊಂದನ್ನು ಅವರು ಮೊದಲು ರೂಪಿಸಿದರು.

ಫೆಬ್ರವರಿ ೨೧ರಂದು 'ಲೋಕ ತಾಯ್ನುಡಿ' ದಿನವನ್ನು ಆಚರಿಸಬೇಕಾಗಿದೆ. ಈ ದಿನಾಚರಣೆಯ ಮೂಲ ನೆಲೆ ಇಂದಿನ ಬಾಂಗ್ಲಾ ದೇಶದಲ್ಲಿದೆ. ಆಗ ಅದು ಪೂರ್ವ ಪಾಕಿಸ್ತಾನವಾಗಿತ್ತು. ೧೯೫೨ರ ಫೆಬ್ರವರಿ ೨೧ರಂದು ಭಾಷಾ ಚಳವಳಿಗಾರರ ಮೇಲೆ ಪೊಲೀಸರು ಗುಂಡು ಹಾರಿಸಿ ಐವರನ್ನು ಕೊಂದರು; ಸತ್ತವರು ಹುತಾತ್ಮರಾದರು. ಉರ್ದುವಿನ ಜೊತೆಗೆ ಬಂಗಾಳಿಯನ್ನು ರಾಷ್ಟ್ರ ಭಾಷೆಯನ್ನಾಗಿ ಪರಿಗಣಿಸಬೇಕೆಂಬುದೇ ಆ ಹೋರಾಟಗಾರರ ಬೇಡಿಕೆಯಾಗಿತ್ತು. ಈ ಭಾಷಾ ಚಳವಳಿಯ ಸಂದರ್ಭದಲ್ಲಿ ಆಡಳಿತ ಕೇಂದ್ರವಾಗಿದ್ದ ಪಶ್ಚಿಮ ಪಾಕಿಸ್ತಾನದ ಬಗ್ಗೆ ಮೂಡಿದ್ದ ಅಸಮಾಧಾನ ಆಕಾರ ತಳೆದು ಬೆಳೆದು ಕೊನೆಗೆ ೧೯೭೧ರಲ್ಲಿ ಬಾಂಗ್ಲಾದೇಶ ಸ್ವತಂತ್ರ ರಾಷ್ಟ್ರವಾಗಲು ಕಾರಣವಾಯಿತು.

ಈ ಹೋರಾಟಕ್ಕೆ ಯುನೆಸ್ಕೋ ಜಾಗತಿಕ ಮನ್ನಣೆಯನ್ನು ಒದಗಿಸಿತು. ಬಹು ಭಾಷಿಕ ಸನ್ನಿವೇಶಗಳ ಪೋಷಣೆಯನ್ನು ಪ್ರೇರೇಪಿಸಲೆಂದು ಫೆಬ್ರವರಿ ೨೧ರಂದು 'ಲೋಕ ತಾಯ್ನುಡಿ' ದಿನವನ್ನಾಗಿ ಆಚರಿಸಲು ನಿರ್ಧರಿಸಲಾಯಿತು.[೧]

ಯುನೆಸ್ಕೋ ಮಾಡಿದ ಈ ನಿರ್ಧಾರದಿಂದ ಮೈ ತಳೆದಿರುವ ಇತ್ಯಾತ್ಮಕ ರಾಜಕಾರಣವನ್ನು ಗಮನಿಸಬೇಕು. ಇಂತಹ ದಿನಗಳನ್ನು (ವ್ಯಾಲೆಂಟೈನ್ ದಿನ, ತಾಯಂದಿರ ದಿನ, ತಂದೆಯರ ದಿನ ಇತ್ಯಾದಿ) ಸಾಮಾನ್ಯವಾಗಿ ಆಪ್ತತೆಯಿಲ್ಲದೆ, ಸದ್ಯದ ಜನರ ಸ್ಥಿತಿಗತಿಗಳಿಗೆ ಸಂಬಂಧವಿರದ ಬಣ್ಣ ಬಣ್ಣದ ಕಾರ್ಡುಗಳ ಮೂಲಕ, ಘೋಷಣೆಗಳ ಮೂಲಕ ಆಚರಿಸುತ್ತೇವೆ. ಈ ದಿನಗಳಲ್ಲಿ ಹೊರ ಹೊಮ್ಮುವುದು ವೈಯಕ್ತಿಕ ಭಾವಗಳು; ಇವು ಶ್ರೀಮಂತ ರಾಷ್ಟ್ರಗಳು ಪ್ರತಿಪಾದಿಸುವ ಏಕಜಗತ್ತಿನ ಹಸಿಬಿಸಿ ನೆಲೆಯ ವ್ಯಕ್ತಿಗತ ಭಾವಗಳ ಬಿಂಬಗಳಾಗಿರುತ್ತವೆ. ಇಂತಹ ಹಬ್ಬಗಳು ನಾವು ಎದುರಿಸುತ್ತಿರುವ ಗಾಢ ಸಮಸ್ಯೆಗಳನ್ನು ನಮ್ಮ ನೆನಪಿನಿಂದ ದೂರ ಇಡುತ್ತವೆ. ಆದರೆ, ಸಂಕಷ್ಟಗಳಿಂದ ತುಂಬಿರುವ ಬಾಂಗ್ಲಾ ದೇಶದಂತಹ ದೂರದ ನಾಡಿನಲ್ಲಿ ಆಕಾರ ಪಡೆದ ಈ ತಾಯ್ನುಡಿ ದಿನದ ಆಚರಣೆ ನೆನಪಿಗೆ ತರುವುದೇನು ? ಲೋಕದ ಎಲ್ಲೆಡೆ ಇರುವ ಭಾಷಾ ಸಮುದಾಯಗಳು ತಂತಮ್ಮ ನುಡಿಗಳನ್ನು ರಕ್ಷಿಸಿಕೊಳ್ಳಲು ಯಾವ ಬಗೆಯ ಹೋರಾಟಗಳನ್ನು ಹಮ್ಮಿಕೊಳ್ಳಬೇಕು; ತಂತಮ್ಮ

---

೧. ಡಿಸೆಂಬರ್ ೨೦೦೨ರಲ್ಲಿ ಸಿರ್‍ರಲಿಯೊನ್ ಎಂಬ ಯುದ್ಧಪೀಡಿತ ದೇಶವು ತನ್ನಲ್ಲಿ ಶಾಂತಿ ಪಡೆಯ ಭಾಗವಾಗಿ ಕಾರ್ಯನಿರ್ವಹಿಸಿದ್ದ ಬಾಂಗ್ಲಾ ಯೋಧರ ನೆನಪಿಗಾಗಿ ಬಂಗಾಳಿ ಭಾಷೆಯನ್ನು ಒಂದು ಅಧಿಕೃತ ಭಾಷೆಯನ್ನಾಗಿ ಮನ್ನಣೆ ಮಾಡಿತು.

ಚಹರೆಗಳಾಗಬೇಕಾದ ತಮ್ಮ ಭಾಷೆಯನ್ನು ಹೇಗೆ ಕಾಯ್ದುಕೊಳ್ಳಬೇಕು ಎಂಬ ಸಂಗತಿ ಕಡೆಗೆ ಗಮನ ಸೆಳೆಯುವುದು ಈ ಆಚರಣೆಯ ಮೂಲೋದ್ದೇಶ.

ಈ ದಿನದ ಸಾಂಕೇತಿಕತೆಯ ಮಾತಂತಿರಲಿ. ಕನ್ನಡಕ್ಕೆ ಯಾವ ಬಗೆಯ ಆತಂಕಗಳೂ ಇಲ್ಲವೆಂದು ತಿಳಿಯುವ ನಿರಾಳವಾದಿಗಳಲ್ಲಿ ನಮ್ಮ ಭಾಷೆ ಎದುರಿಸುತ್ತಿರುವ ಸಮಸ್ಯೆಗಳನ್ನು ಕುರಿತಂತೆ ಒಂದು ಚರ್ಚೆಯನ್ನು ಹುಟ್ಟುಹಾಕಬೇಕೆಂಬ ಆಶಾಭಾವನೆ ನಮ್ಮದು.

ಕನ್ನಡದ ಮಟ್ಟಿಗೆ ಹೇಳುವುದಾದರೆ ಎರಡು ಬಗೆಯ ವಿದ್ವಾಂಸರಿದ್ದಾರೆ. ಮೊದಲ ಬಗೆಯವರು ಬಾವಿಯ ಕಪ್ಪೆಗಳು. ಊನಗೊಂಡ ವಾಸ್ತವವನ್ನೇ ಸರ್ವಸ್ವವೆಂದು ತಿಳಿಯುವುದೇ ಅವರ ಮಿತಿಯಾಗಿದೆ. ಅವರಿಗೆ ಯಾವ ಆತಂಕಗಳೂ ಕಾಣವು. ಭಾಷೆಯ ಪರಂಪರೆಯನ್ನು ಅದರ ವೈಭವವನ್ನು ನಮ್ಮೆದುರು ಸುರುಳಿ ಸುರಳಿಯಾಗಿ ತೆರೆದಿಡುತ್ತಾರೆ ಇವರು. ಹಿಂದೆ ನಡೆದ ಸಂಗತಿಗಳಿಂದ ಮಾರ್ಗದರ್ಶನ ಪಡೆಯಲು ಸನ್ನದ್ಧರಾಗಿರುವ ಇವರು ಇಂದು ಏನಾಗುತ್ತಿದೆ ಎಂಬ ಬಗೆಗೆ ನಿರಾಸಕ್ತರು. ಭಾಷೆಯನ್ನು ಕುರಿತ ಹೆಮ್ಮೆ, ಅಭಿಮಾನಗಳ ನುಡಿಗಟ್ಟಿನಲ್ಲಿ ಮಾತಾಡುತ್ತಾರೆ.

ಎರಡನೆಯ ಬಗೆಯವರು ಇಂದಿನ ಇಕ್ಕಟ್ಟುಗಳಿಗೆ ನೇರವಾಗಿ ಸ್ಪಂದಿಸುವವರಲ್ಲ. ಈ ಸಂಕಷ್ಟಗಳನ್ನು ಅವರು ಸಂಪೂರ್ಣವಾಗಿ ಕಡೆಗಣಿಸುತ್ತಾರೆ. ಆದರೆ ಈ ಸಂದರ್ಭದ ಪ್ರಯೋಜನವನ್ನು ಅವರು ಪಡೆಯಲು ಸದಾ ಸಿದ್ಧರಾಗಿರುತ್ತಾರೆ. ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ವೇದಿಕೆಗಳಲ್ಲಿ ನಮ್ಮ ಭಾಷೆಯ ಚಹರೆಗಳನ್ನು ಉಳಿಸಿಕೊಳ್ಳುವ ನೆಲೆಯಲ್ಲಿ ಕನ್ನಡದ ಪ್ರಾತಿನಿಧ್ಯವನ್ನು ಮಾಡಲು ಅವರು ತುದಿಗಾಲಿನಲ್ಲಿರುತ್ತಾರೆ. ವಿಚಾರ ಸಂಕಿರಣಗಳಲ್ಲಿ, ಅನುವಾದಗಳ ಸಂಕಲನಗಳಲ್ಲಿ ಅವರು ಯಾವಾಗಲೂ ಕನ್ನಡವನ್ನು ಪ್ರತಿನಿಧಿಸುತ್ತಾರೆ. ನಾಡಿನೊಳಗೆ ನಡೆಯುವ ಭಾಷೆಯನ್ನು ಕುರಿತ ಚರ್ಚೆಗಳಿಂದ ಅವರು ದೂರ. ಆಗಾಗ ಕೆಲಸಕ್ಕೆ ಬಾರದ ಚರ್ಚೆಗಳಲ್ಲಿ ಭಾಷಿಕವಾದ ಬಣ್ಣವನ್ನು ನೀಡುವುದುಂಟು. "ತಾಯಿನುಡಿ"ಯನ್ನು "ಮನೆಮಾತು" ಎಂದು ಹೊಸದಾಗಿ ಹೆಸರಿಸಬೇಕೆ ಎಂಬುದು ಅಂತಹ ಚರ್ಚೆಗಳಲ್ಲಿ ಒಂದಾಗಿದೆ. ಹೆಸರಿಡುವ ಸಡಗರದಲ್ಲೇ ನಿಲ್ಲುವ ಈ ಚರ್ಚೆಗಳು ಆತಂಕದ ಇಕ್ಕಟ್ಟುಗಳಿಂದ ದೂರ ಉಳಿದು ಗಮನವನ್ನು ಬೇರೆಡೆಗೆ ಸೆಳೆಯುತ್ತವೆ.

ಯಾಕೆ ಎದುರಿಗಿರುವ ಇಕ್ಕಟ್ಟನ್ನು ಗುರುತಿಸುತ್ತಿಲ್ಲ? ಅಥವಾ ಈ ಇಕ್ಕಟ್ಟು ಮತ್ತಷ್ಟು ದಟ್ಟವಾಗಿ ಮುಂಚೂಣೆಗೆ ಬಂದು ಸಿಡಿಯುವ ಹಂತವನ್ನು ತಲುಪಬೇಕಾಗಿದೆಯೇ? ಆದರೆ ಹೀಗೆ ಕಾಯುತ್ತ ಕೂರುವುದು ತೀರಾ ಅಪಾಯಕಾರಿ. ನಮ್ಮ ಸಾಂಸ್ಕೃತಿಕ ಸಂಸ್ಥೆಗಳು ತಲುಪಿರುವ ದಾರಿಕಾಣದ ಸ್ಥಿತಿಯನ್ನು ನಾವೀಗ ಪರಿಶೀಲಿಸಬೇಕು; ಕನ್ನಡ ಪತ್ರಿಕೆಗಳೂ ಸೇರಿದಂತೆ ಎಲ್ಲಾ ಪತ್ರಿಕೆಗಳು ಹೊಸ ಓದುಗರನ್ನು ರೂಪಿಸುತ್ತಿಲ್ಲ; ಇರುವವರನ್ನೇ ಹಂಚಿಕೊಳ್ಳುತ್ತಿವೆ. ಕನ್ನಡದಲ್ಲಿ ಮುದ್ರಣಗೊಳ್ಳುವ ಸಾಮಗ್ರಿಯನ್ನು ಓದುವವರ ಸಂಖ್ಯೆ ನಿಂತ ನೀರಾಗಿರುವುದನ್ನು ಗಮನಿಸಬೇಕು. ಕನ್ನಡವೀಗ ತನ್ನ ಅಸ್ತಿತ್ವವನ್ನು ಕಾಯ್ದುಕೊಳ್ಳಲು ವಿಶೇಷ ರಾಜ್ಯಾಂಗದತ್ತ ಸವಲತ್ತುಗಳನ್ನು ಎದುರು ನೋಡಬೇಕಾಗಿದೆ. ಕನ್ನಡ ಅಭಿವೃದ್ಧಿ ಪ್ರಾಧಿಕಾರದಂತಹ ಶಾಸನಬದ್ಧ ಸಮಿತಿಗಳು ಈ ಕೆಲಸಕ್ಕಾಗಿಯೇ ಮೈ ತಳೆದಿವೆ.

ಕೇವಲ ಅಂಧಾಭಿಮಾನದ ನೆಲೆಯಲ್ಲಿ ನಿಲ್ಲದೆ ಸಾರ್ವಜನಿಕ ಪ್ರಜ್ಞಾವಲಯಕ್ಕೆ ಈ ಭಾಷಾ ಸಂಕಷ್ಟದ ಸನ್ನಿವೇಶವನ್ನು ತರುವುದು ಈ ಲೇಖನದ ಗುರಿಯಾಗಿದೆ. ಇದು ಅತ್ಯಂತ ಮುಖ್ಯವಾದ

ಆದರೆ ಅಷ್ಟೇ ಕಷ್ಟದ ಕೆಲಸ. ಭಾಷೆಯ ವಿವಿಧ ವ್ಯವಹಾರಗಳನ್ನು ಪೋಷಿಸುವ ಪರಿಣಾಮಕಾರಿ ನೆಲೆಗಳನ್ನು ಬೆಳೆಸುವ ಕಡೆಗೆ ನಾವೀಗ ಗಮನ ಹರಿಸಬೇಕಾಗುತ್ತದೆ. ಜೊತೆಗೆ ಮೂರು ಹಂತದ ಸಾಂಸ್ಕೃತಿಕ ನಾಯಕತ್ವಕ್ಕೆ ಸಿದ್ಧತೆಗಳನ್ನು ಮಾಡಿಕೊಳ್ಳಬೇಕು.

ಮೊದಲ ಹಂತವೆಂಬುದು ವೈಚಾರಿಕ ನೆಲೆಯದ್ದು. ಈ ಹಂತದಲ್ಲಿ ನಮ್ಮ ಭಾಷೆ ಮತ್ತು ಸಂಸ್ಕೃತಿಗಳ ಬಗೆಗೆ ಸೈದ್ಧಾಂತಿಕವಾದ ನೆಲೆಯ ಕಾರ್ಯಕ್ರಮಗಳನ್ನು ರೂಪಿಸಿ ಅವುಗಳನ್ನು ಜಾರಿಗೆ ನೀಡುವ ಕೆಲಸವನ್ನು ಮಾಡುವುದು ಈ ನಾಯಕತ್ವದ ಹೊಣೆಯಾಗಿರುತ್ತದೆ. ಎರಡನೆಯ ಹಂತದ ನಾಯಕತ್ವ ಭಾಷಾ ಸಮುದಾಯದಲ್ಲಿ ತಮ್ಮ ಭಾಷೆಯ ಬಗೆಗೆ ಅದರ ಅಂತಸ್ಸತ್ವದ ಬಗೆಗೆ ನಂಬಿಕೆಯನ್ನು ಬೆಳೆಸುವ ಹೊಣೆಯನ್ನು ಹೊರುತ್ತದೆ. ಮೂರನೆಯ ಹಂತದ ನಾಯಕತ್ವ ರಾಜಕೀಯ ನಿರ್ಣಯಗಳನ್ನು ತೆಗೆದುಕೊಂಡು ಅವುಗಳನ್ನು ಜಾರಿಗೆ ಕೊಡುವ ಅವಕಾಶಗಳನ್ನು ಹೊಂದಿರುವುದು. ಈ ಮೂರು ಹಂತಗಳಲ್ಲಿ ತರತಮಭಾವವೇನೂ ಇಲ್ಲ. ಅಥವಾ ಇರಬಾರದು. ಇವು ತಮ್ಮ ತಮ್ಮಲ್ಲೇ ಪರಸ್ಪರ ಸಹಕಾರದೊಡನೆ ಕೆಲಸ ಮಾಡಬೇಕು.

ಇತರ ಭಾಷಾ ಸಂಸ್ಕೃತಿಯಲ್ಲಿ ಅದರಲ್ಲೂ ಯುರೋಪಿನ ಭಾಷಾ ಸಂದರ್ಭದಲ್ಲಿ ನಡೆಯುತ್ತಿರುವ ಚರ್ಚೆಗಳು ನಮಗೆ ಅವಶ್ಯವಾದ ಕಾರ್ಯಕ್ರಮಗಳನ್ನು ರೂಪಿಸಲು ಸೂಚನೆಗಳನ್ನು ನೀಡಬಲ್ಲವು. ೨೦೦೧ನೆಯ ವರ್ಷವನ್ನು ಯುರೋಪಿಯನ್ ಭಾಷೆಗಳ ವರ್ಷವೆಂದು ಘೋಷಿಸಲಾಗಿತ್ತು. ಯುರೋಪಿನಲ್ಲಿ ಬಹುಭಾಷಿಕತೆಯನ್ನು ಪ್ರೋತ್ಸಾಹಿಸಲು ಯುರೋಪಿಯನ್ ಯೂನಿಯನ್ ಮತ್ತು ಕೌನ್ಸಿಲ್ ಆಫ್ ಯುರೋಪ್ ಎಂಟು ಮಿಲಿಯನ್ ಡಾಲರ್‌ಗಳ ಯೋಜನೆಯೊಂದನ್ನು ರೂಪಿಸಿದ್ದವು. ಈ ಯೋಜನೆಯ ವಿವರಗಳು www.eyl2001.org.uk ಅಂತರ್ಜಾಲದಲ್ಲಿ ದೊರಕುತ್ತವೆ. ಬಹುಭಾಷಿಕತೆಯ ವಾತಾವರಣವನ್ನು ಬೆಳೆಸಲು ಯುರೋಪಿನಲ್ಲಿ ವ್ಯವಸ್ಥಿತವಾದ ಸಾಂಸ್ಥಿಕ ಪ್ರಯತ್ನಗಳು ನಡೆಯುತ್ತಿರುವುದನ್ನು ನಾವು ನೋಡಬಹುದು. ಸೆಪ್ಟೆಂಬರ್ ೨೬ರಂದು ಯುರೋಪಿಯನ್ ಭಾಷಾ ದಿನವನ್ನಾಗಿ ಆಚರಿಸಲಾಗುತ್ತದೆ.

ಉತ್ತರ ಅಮೆರಿಕದ ಕೆಲವು ರಾಜ್ಯಗಳಲ್ಲಿ ನಡೆಯುತ್ತಿರುವ "ಇಂಗ್ಲಿಷ್ ಮಾತ್ರ" ಮತ್ತು "ಇಂಗ್ಲಿಷ್ ಜೊತೆಗೆ" ಮಾದರಿಯ ಚರ್ಚೆಗಳು ಕೂಡ ಕುತೂಹಲಕಾರಿಯಾಗಿವೆ. ಇದಲ್ಲದೆ ದಕ್ಷಿಣ ಆಫ್ರಿಕಾ ಅಳವಡಿಸಿಕೊಂಡ 'ಶಿಕ್ಷಣದಲ್ಲಿ ಬಹು ಭಾಷಿಕತೆ'ಯನ್ನು ಕುರಿತ ಶಾಸನ, ಶ್ರೀಲಂಕಾ ಅಳವಡಿಸಿಕೊಂಡ ತ್ರಿಭಾಷಿಕ 'ಶಾಂತಿ ಸೂತ್ರ' ಇವೆಲ್ಲವೂ ನಮ್ಮ ವಿಚಾರಗಳಿಗೆ ಪೂರಕವಾಗಬಲ್ಲವು.

ಕೊನೆಗೆ ಜಾಗತೀಕರಣದ ಈ ಸಂದರ್ಭದಲ್ಲಿ ಭಾಷೆಯ ಇಕ್ಕಟ್ಟುಗಳನ್ನು ಅರಿತುಕೊಳ್ಳಲು ಇಲ್ಲಿ ಯತ್ನಿಸಲಾಗಿದೆ. ಜಾಗತೀಕರಣ ಮತ್ತು ಅಂತಾರಾಷ್ಟ್ರೀಕರಣಗಳ ನಡುವೆ ಇರುವ ವ್ಯತ್ಯಾಸಗಳನ್ನು ಮೊದಲು ಗುರುತಿಸಿಕೊಳ್ಳಬೇಕು. ಎಲ್ಲ ದೇಶಗಳನ್ನೂ ಒಂದೇ ಆರ್ಥಿಕ ವ್ಯವಸ್ಥೆಯು ನುಂಗುವುದು ಜಾಗತೀಕರಣ. ಇದು ಪರ್ಯಾಯಗಳಿಲ್ಲದ ಕಂಗೆಟ್ಟ ಭವಿಷ್ಯ. ಇರುವ ಒಂದೇ 'ಆಯ್ಕೆ'ಗೇ ರಾಜಮನ್ನಣೆ. ಅಂತಾರಾಷ್ಟ್ರೀಯವಾದಿಗಳು ಮತ್ತೊಂದು ಬಗೆಯ ಏಕತೆಯನ್ನು ಕುರಿತು ಮಾತನಾಡುತ್ತಾರೆ. ಇಲ್ಲಿ ಮೇಳನವಿರುತ್ತದೆ, ಇಲ್ಲಿ ಹಿಂಸೆ ಇರುವುದಿಲ್ಲ, ಹೆಚ್ಚು ನ್ಯಾಯಪರತೆ ಇರುತ್ತದೆ. ಜಾಗತೀಕರಣದ ಸನ್ನಿವೇಶದಲ್ಲಿ ನಮ್ಮ ಚಹರೆಗಳನ್ನು ಊನಗೊಳಿಸಿಕೊಂಡು ಹೊಂದಾಣಿಕೆ ಮಾಡಿಕೊಂಡು ಕಾರ್ಯ ನಿರ್ವಹಿಸಬೇಕಾಗುವುದು. ಆದರೆ ನಿಜವಾದ ಅರ್ಥದ

ಅಂತಾರಾಷ್ಟ್ರೀಯತೆಯ ಸನ್ನಿವೇಶದಲ್ಲಿ ಸಂಸ್ಕೃತಿ ಮತ್ತು ಭಾಷೆಗಳು ಅವೆಷ್ಟೇ ಕಿರಿಯವಾಗಿರಲಿ, ತಮ್ಮ ದನಿಯನ್ನು ಎಂದೂ ಕಳೆದುಕೊಳ್ಳುವುದಿಲ್ಲ.

ನಮ್ಮ ಕಾಲದ ಮುಖ್ಯ ಲಕ್ಷಣವಾದ ವಲಸೆಯ ಪ್ರವೃತ್ತಿಯಿಂದಾಗಿ ಜಾಗತೀಕರಣವನ್ನು ನಾವು ಸುಲಭವಾಗಿ ನಿವಾರಿಸಲು ಬರುವುದಿಲ್ಲ. ಈ ಪ್ರವೃತ್ತಿಗೆ ಪೂರಕವಾಗಿ ಸಂವಹನ ವ್ಯವಸ್ಥೆಯಲ್ಲಿ ಅಭೂತಪೂರ್ವ ರೀತಿಯ ಕ್ರಾಂತಿಯು ನಡೆದಿದೆ. ಜಾಗತೀಕರಣವನ್ನು ಹೆಚ್ಚು ಆರೋಗ್ಯಕರವಾದ ಅಂತಾರಾಷ್ಟ್ರೀಯತೆಯ ನೆಲೆಗೆ ದಾಟಿಸುವುದು ಮಾತ್ರ ಸಾಧ್ಯ.

ಭೌಗೋಳಿಕ ಗಡಿಗಳು ಈಗ ದಾಟಲಾರದ ಗೋಡೆಗಳಲ್ಲ. ಅವು ರಾಷ್ಟ್ರದ ಕಲ್ಪನೆಯಂತೆಯೇ ಹೆಚ್ಚು ಅಮೂರ್ತವಾಗಿವೆ. ಹೀಗಾಗಿ ಕನ್ನಡದ ಸಮಸ್ಯೆ ಕೇವಲ ಕನ್ನಡದ್ದು ಮಾತ್ರವಲ್ಲ. ಕನ್ನಡ ಭಾಷೆ ಮತ್ತು ಸಂಸ್ಕೃತಿಯನ್ನು ಅಲ್ಪ ಸಂಖ್ಯಾತ ನೆಲೆಯಲ್ಲಿ ಇರಿಸುವುದರಿಂದ ಒದಗುವ ಸೌಲಭ್ಯವೇನು ಎಂಬುದನ್ನು ನಾವು ಯೋಚಿಸಬೇಕು: ( ಅಲ್ಪ ಸಂಖ್ಯಾತ ಎಂಬ ಮಾತು ಪ್ರಾದೇಶಿಕ ಹೆಮ್ಮೆಯಿಂದ ಬೀಗುವ ಮನಸ್ಸಿಗೆ ಮುಜುಗರವನ್ನು ತರಬಹುದು) ಆಗ ಸಾಂಸ್ಕೃತಿಕ ಮತ್ತು ಭಾಷಿಕ ಸಾಮ್ರಾಜ್ಯಶಾಹಿಯನ್ನು ಒಟ್ಟಾಗಿ ಎದುರಿಸುವ ಅಂತಾರಾಷ್ಟ್ರೀಯ ಯತ್ನದಲ್ಲಿ ಕನ್ನಡಕ್ಕೂ ಒಂದು ಸ್ಥಾನ ಸಿಗುತ್ತದೆ. ಇಂತಹ ಅಂತಾರಾಷ್ಟ್ರೀಯ ವಾತಾವರಣದಲ್ಲಿ ಕ್ಯಟಲನ್, ಸ್ವಾಹಿಲಿ, ಸ್ಲೊವೆನ್, ಬ್ರಿಟೊನ್ ಅಥವಾ ಬಾಸ್ಕ್ ರೀತಿಯ ಭಾಷೆಗಳೊಡನೆ ಸಂಪರ್ಕ ಸಾಧಿಸುವುದು ಸಾಧ್ಯವಾಗುತ್ತದೆ. ಕನ್ನಡದ ಸಂಬಂಧ ಆಗ ಇಂಗ್ಲಿಷಿಗೆ ಮಾತ್ರ ಮಿತವಾಗುವುದಿಲ್ಲ. ಹಾಗೆ ಇಂಗ್ಲಿಷಿಗೆ ಮಿತಗೊಳ್ಳುವುದು ಜಾಗತೀಕರಣದ ಅನಿವಾರ್ಯತೆಯಾಗಿ ಬಿಡುತ್ತದೆ. ಕನ್ನಡ ಹೊಸ ದಾರಿ ಹಿಡಿದಾಗ ಮಾತ್ರ ಹೊಸ ಅಂತಾರಾಷ್ಟ್ರೀಯ ಜಾಲದ ಸದಸ್ಯ ಭಾಷೆಯಾಗುತ್ತದೆ.

□

(ಸೌಜನ್ಯ : **ಎಕೂಪೆ ಫೆಬ್ರುವರಿ**
ಸಂ : ಸುಗತ ಶ್ರೀನಿವಾಸರಾಜು
ಸಂಚಯ ಪ್ರಕಾಶನ, ಬೆಂಗಳೂರು.)

# ಒಂದು ಕವಿತೆ / ಎರಡು ಗಜ಼ಲ್

ತುರುವೀಹಾಳ ಚಂದ್ರು

## ಬಿಳಿ ಹೂವು

ಹೋಗು; ನಿನ್ನ ಸೌಂದರ್ಯ, ಸಂತಸಗಳನು
ಜಗತ್ತಿಗೇ ಹಂಚಿ ಬಾ...

ನನಗೆ ನಿನ್ನ ನೋವುಗಳನ್ನು ಮಾತ್ರ ನೀಡು,
ಅವುಗಳನು ಈ ಎದೆಯಲಿ ಹಾಕಿಕೊಂಡು ಸಂತೈಸಲು
ನಿನ್ನ ಬೀಳ್ಕೊಟ್ಟ ಇದೇ ಹಾದಿಯಲಿ ನಾನು ನಿಂತಿರುತ್ತೇನೆ

ಯಾವ ಜನ್ಮದ ಋಣವೊ
ಕಣ್ಣುಗಳು ನಿನ್ನ ಮೊದಲ ಭೇಟಿಯಲ್ಲಿಯೆ ಗುರುತು ಹಿಡಿದವು
ನಾವೇನೂ ಅಪರಿಚಿತರಾಗಿರಲಿಲ್ಲ

ಈ ನೆಲದವಳು ನೀನು ಹೊರಟಿದ್ದೀಯಾ ಹೋಗು...

ನಿನ್ನ ಪ್ರೀತಿಗೆಂದು ನೆತ್ತರಲಿ ನೆಂದಿರುವ
ಎದೆಯ ಎಡಭಾಗದ 'ಪುಷ್ಪ'ವನು ಅರ್ಪಿಸಿರುವೆ ಜೋಪಾನ
ಆ ಖಾಲಿ ಜಾಗದಲಿ ನಿನ್ನೊಂದು ಚಿತ್ರವನು ನಾ ಇಟ್ಟುಕೊಳ್ಳಬಹುದೆ?

ಎಷ್ಟೋ ಸಾರಿ ನಿನ್ನ ಮನೆಯಿಂದ ಹೊರ ಬರುವಾಗ
ಎಳೆಮರಿಯನು ಗೂಡಿನಲೇ ಬಿಟ್ಟು ಬರುವ ತಾಯಿಹಕ್ಕಿಯ
ಮನಸು ಹೊತ್ತು ಬಂದಿದ್ದೇನೆ

ದುಗುಡವಾಗುತ್ತಿದೆ ಈಗ ; ಈ ಜಗತ್ತಿನಲಿ ನಿನ್ನೊಂದಿಗೆ ಲಕ್ಷ, ಜನರಿದ್ದರೂ
ನಿನ್ನಾಳದ ಒಂಟಿತನವೆನ್ನುವ ಹಠಮಾರಿ ಕಂದನಿಗೆ
ಆಟಕ್ಕೆಂದು ಪ್ರಾಣ ನೀಡುವವರಾರು ನನ್ನಂತೆ?

ಬಿಡು, ನಿನ್ನ ಬದುಕಿನ ಮುಂಜಾವಿನಲಿ
ನನ್ನ ಮಾತು, ಪಾಪಗಳು ಕಪ್ಪು ಹೂಗಳಾಗಿ ಅರಳುವುದು ಬೇಡ

ಒಂದು ದಿವ್ಯ ಯಾತ್ರೆ ಮುಗಿಸಿ, ಬದುಕಿನ ಸುಖ ಉಂಡು
ದಣಿವು ವಾಪಸು ಬರುವಾಗ ನನಗಾಗಿ, ಇದ್ದರೆ
ಅಶ್ರುಗಳನು ಮೀಸಲಿಟ್ಟುಕೊಂಡು ಬಾ
ನಿನ್ನ ಕಾದ ನನ್ನ ಕಣ್ಣಮಣಿಗಳು ಹಲವನು ಹೊತ್ತಿಸಿ
ಜೋಡಿ ಹಣತೆ ಹಚ್ಚಿಟ್ಟು ನಾವು ಹಬ್ಬ ಮಾಡೋಣ

ಇದ್ದಾಗ ಒಂದು ಬಾರಿಯೂ ಬರದೆ ಹೋದರೆ
ನನ್ನ ನಿಷ್ಠೆಗೆ ತಲೆಬಾಗಿ ಕೊನೆಗೆ ನೀನೊಂದು ದಿನ
ನಿನ್ನ ತುಂಟ ಕಣ್ಣಲಿ ತೊಯ್ದ ಒಂದು ಬಿಳಿ ಹೂವನು
ನನ್ನ ಕುಣಿಯ ಮೇಲೆ ಇಡಲಾದರೂ ಖಂಡಿತ ಬರುತ್ತಿ,
ಅದಷ್ಟು ಗೊತ್ತು.

## ಆಕಾಶದೆದೆಯಲಿ ಚಂದ್ರ ದೀಪ (ಗಜ಼ಲ್)

ಕತ್ತಲ ಆತ್ಮ ಹೊತ್ತ ಹಗಲು, ಆಕಾಶದೆದೆಯಲಿ ಚಂದ್ರದೀಪ
ಜಗದ ಅನಾಥ ಕನಸುಗಳ ಕಾಯುವ ಕಾವಲು ದೀಪ

ಎಷ್ಟು ಬಿಕ್ಕಳಿಕೆಗಳು ಒಡಲು ದಾಟದೇ ಒಳಗೇ ಇಂಗಿ ಹೋದವು
ಗರ್ಭಗುಡಿಯಲಿ ಒಂಟಿಯಾಗಿ ದೇವರ ಬೆಳಗುವ ದೀಪ

ಸಾಯುವವರ ಕೈ ಹಿಡಿದು ತಡೆದವರು ಯಾರು?
ಜೀವ ತೂಗುವ ನಿನ್ನ ಕಣ್ಣ ದೀಪ

ಎದೆಯ ಗಾಯಗಳಿಗೆ ನಾಲಿಗೆಯ ಮುಲಾಮು
ನೆರಳ ಮೌನದಂತೆ ಉರಿವ ದೀಪ

ಪ್ರೀತಿಗೆ ಕಾಯುತ್ತ ರುದ್ರಭೂಮಿಯಲಿ ಮಲಗಿರುವ ಮನಸುಗಳು
ಹಬ್ಬಕೆ ಬಾಗಿಲಲಿ ಹಚ್ಚಿಟ್ಟ ಸಾಲು ದೀಪ

ಕಪ್ಪು ಪಾಪೆಯಲಿ ಮೋಡಕಟ್ಟಿ ಮಳೆಯಾದ ದಿನ
ಹೃದಯದೊಳಗೇ ಉಸಿರಾಡುವ ಪ್ರಾಣದೀಪ

'ಬದುಕಿನೊಂದಿಗೆ ಆಟಪಾಡು, ಭಾವನೆಗಳೊಂದಿಗೆ ಬೇಡ'
ನೀ ಬಂದಿ ಎನ್ನುವ ಭಾವ ಮೂಡಿಸುವ ನೆರಳ ದೀಪ

ಕಿಬ್ಬೊಟ್ಟೆಯಲಿ ನಾ ಉಸಿರಿಟ್ಟ ಘಳಿಗೆ
ನಿನ್ನ ಕಣ್ಣೊಳಗೆ ತಣ್ಣಗೆ ಕದಲುವ ಕೋಟಿ ದೀಪ

ತೊಟ್ಟಿಲಲಿ ಅತ್ತು ಅತ್ತು ತುಟಿಯಾರಿದ ಹಸುಗೂಸಿಗೆ
ಋತುಗಳಾರನು ಕಲೆಸಿ ಹಾಲುಣಿಸಿದ ತಾಯಿ ದೀಪ

## ಮಣ್ಣಾಗಿ ಕಾದರೊಂದು ದಿನ (ಗಜ಼ಲ್)

ಅವಳ ದೇವರಿಗೆ ಯಾವ ಘಳಿಗೆಗಾದರೂ ಹೇಳಿ ಕಳಿಸಲಿ ಸಾಕಿ, ಕೊಂಡೊಯ್ಯಲು ನನ್ನ ಹರಣ
ಈ ಪ್ರೀತಿ ಕೆಂಡ ನುಂಗಿದ ದಿನದಿಂದಲೇ ಅವಳು ನನ್ನ ಹೃದಯಕ್ಕೆ ಹಿಡಿದ ಗ್ರಹಣ

ನಾನು ಆಯಾಸದಿಂದ ಅಡವಿಯಲಿ ಬಿದ್ದು ಹಾಳಾಗಿ ಹೋಗುವ ಬೆಳದಿಂಗಳು
ಸಖಿ, ದಣಿವಾರಿಸಿಕೊಳ್ಳಲೊಂದು ದಿನ ತುಸು ಜಾಗ ನೀಡಿದರೆ ಸಾಕು ನಿನ್ನ ಕಂಗಳು

ನಿನ್ನೊಳಗಿಳಿದಿರುವುದು ಯಾವ ಹೂವಿನ ಬೀಜ, ಉಸಿರಿನಿಂದ ಗಾಳಿಗೂ ಗಂಧ ಸವರುತ್ತಿ
ಸಾವಿರಾರು ಕುಸುಮಗಳ ಹಸಿ ಹಸಿ ಗಾಯದಂತೆ ಸಣ್ಣಗೆ ನೀನು ಬೆವರುತ್ತಿ

ಸುಡುವ ಮಾತೇಕೆ ಸಖಿ, ಸ್ಪಷ್ಟವಾಗಿ ನನ್ನನೊಮ್ಮೆ ಹೀರಿಬಿಡು ನಿನ್ನ ಬೆಚ್ಚನೆಯ ಕಣ್ಣಲಿ
ಎರಡು ಹನಿ ಕಣ್ಣೀರಾಗಿ ಈ ಜೀವ ನಿನ್ನ ಸ್ಪರ್ಶ ಸುಖವನ್ನಾದರೂ ಉಣ್ಣಲಿ

ನೀರು - ಗಾಳಿ, ಮರ -ಮಳೆ ತಣಿಸಬಹುದು ಗೆಳತಿ ನಿನ್ನೊಡಲ ಬೇಗೆ
ಮಣ್ಣಾಗಿ ಕಾದರೊಂದು ದಿನ ನೀ ನನ್ನಿಂದ ತಪ್ಪಿಸಿಕೊಂಡಿಯಾ ಹೇಗೆ ?

ಬಿಡು, ಬಿಡು ನಿನ್ನ ಧಿಮಾಕು: ಈ ಜನರ ನಡುವೆ ನೀ ಎಷ್ಟು ಒಂಟಿ ಎಂದು ನಾನು ಬಲ್ಲೆ
ಹಸಿವಿನಿಂದ ಸತ್ತೇನು ಹೊರತು ನೀನು ಹಂಗಿಸಿ ಕೊಡಬಹುದಾದ ಅಮೃತವನೂ ನಾ ಒಲ್ಲೆ

ಸುಖವಾಗಿ ಸಾಗಿ ಹೋಗಲಿ ಸಾಕಿ, ನನ್ನ ಕಣ್ಣೀರಿನ ಮೇಲೆ ಅವಳ ಬದುಕ ಹಾಯಿದೋಣಿ
ಇನ್ನೇನು? ದಣಿದು ದಾಟಲಿದೆ ನನ್ನ ಶವಯಾತ್ರೆಯ ಮೆರವಣಿಗೆ ಅವಳಿರುವ ಮನೆಯ ಓಣಿ. □

ತುರುವೀಹಾಳ ಚಂದ್ರು, ಉಪಸಂಪಾದಕ
'ಕನ್ನಡ ಪ್ರಭ' ದಿನ ಪತ್ರಿಕೆ, ಬೆಳಗಾವಿ ಆವೃತ್ತಿ, ಕಾಲೇಜು ರಸ್ತೆ, ಬೆಳಗಾವಿ - ೫೯೦೦೦೨

# ಚುಕ್ಕಿ ಚಿತ್ರದ ನಾದ

ಕೆ.ಟಿ. ಗಟ್ಟಿ

ಕವಿತೆಯನ್ನು ಬರೆಯದೆ ಕವಿಯಾಗಲಿಕ್ಕಾಗುವುದಿಲ್ಲ. ಕವಿಯಾಗಿರದವನಿಗೆ ಕವಿತೆ ಬರೆಯಲಿಕ್ಕಾಗುವುದಿಲ್ಲ. "ಕವಿಯಾಗಿರುವುದು" ಎಂದರೆ "ಕವಿಮನದವನಾಗಿರುವುದು" ಎಂದರ್ಥ. "ಕವಿ ಮತ್ತೆ ಹುಟ್ಟುವುದಲ್ಲ, ಅವನು ಹುಟ್ಟಿನಿಂದಲೇ ಕವಿಯಾಗಿರುತ್ತಾನೆ" ಎಂಬುದು ಬಹಳ ಪ್ರಚಲಿತವಾದ ಒಂದು ವಾದ. ಆದರೆ ಕಾವ್ಯ ಪ್ರಕಾಶಕ್ಕೆ ಬರುವುದು ಜನಜಿಹ್ವೆಯಲ್ಲಿರುವ ಮಾತಿನಲ್ಲಿ ತಾನೆ? ಕವಿತೆಯನ್ನು ಬರೆಯಬೇಕಾದರೆ ಆ ಮಾತನ್ನು ಆಡಲು, ಬರೆಯಲು ಗೊತ್ತಿರಲೇಬೇಕಲ್ಲ? ಆದುದರಿಂದ ಕವಿಯ 'ಹುಟ್ಟುವಿಕೆ'ಯನ್ನು ತಾಯಿಯ ಗರ್ಭದಿಂದ ಹೊರಬಿದ್ದ ಸಂದರ್ಭ ಎಂದು ಪರಿಭಾವಿಸುವುದು ಹುಂಬತನವಾದೀತು. ಕವಿ ಬೇರೆ ಯಾವುದೋ ಯಾವತ್ತೋ ಒಂದು ದಿನ 'ಹುಟ್ಟು'ತ್ತಾನೆ. ಈ ಹುಟ್ಟುವಿಕೆಗೆ ವಾಲ್ಮೀಕಿ ಕವಿಯಾಗಿ ಹುಟ್ಟಿದುದನ್ನು ಉದಾಹರಣೆಯಾಗಿ ತೆಗೆದುಕೊಳ್ಳಬಹುದು. ಎಲ್ಲಾ ಕವಿಗಳು ಹುಟ್ಟಿದ್ದು ಹೀಗೆಯೇ.

ಹಾಗಾದರೆ ಕವಿಯಾಗುವುದು ಹೇಗೆ? ಕವಿಯಾಗುವುದು ಹೇಗೆ ಎಂದು ಕವಿ ಮಾತ್ರ ಬಲ್ಲ. ಆದರೆ ಅವನಿಗೆ ಕವಿಯಾಗಲು ಮಾತ್ರ ಗೊತ್ತು; ಹೇಗೆ ಎಂದು ಹೇಳಲು ಅವನಿಗೆ ತಿಳಿಯದು. ಆದರೆ ಕವಿತೆ ಬರೆಯುವುದಕ್ಕೆ ಮೊದಲು ಕವಿಯಾಗಿರುವವನ ಕೆಲವು ಲಕ್ಷಣಗಳನ್ನು ಹೇಳಬಹುದು. ಅವನು ಸಹೃದಯಿಯಾಗಿರುತ್ತಾನೆ. ಕಣ್ಣಿಗೆ ಬಿದ್ದ ಎಲ್ಲಾ ಕವಿತೆಗಳನ್ನೂ ಓದುತ್ತಾನೆ. ಓದಿ ಅರ್ಥ ಮಾಡಿಕೊಳ್ಳುತ್ತಾನೆ, ಮೆಚ್ಚಿಕೊಳ್ಳುತ್ತಾನೆ; ಕವಿತೆಗಳನ್ನು ಹುಡುಕಿಕೊಂಡು ಹೋಗುತ್ತಾನೆ. ಬರೆದಿರದ ಕವಿತೆಗಳನ್ನು ಕೂಡ ಅವನು ಕಾಣುತ್ತಾನೆ. ಕವಿತೆ ಬರೆಯುವ ಮೊದಲು, ಕವಿತೆಯನ್ನು, ಪ್ರತಿಯೊಂದು ಅರ್ಥ ಮಾಡಿಕೊಳ್ಳುವಿಕೆಯು ಒಂದು ಬಿಂದುವಾಗಿ, ಅಂಥ ಸಾವಿರಾರು ಕಾವ್ಯಾನುಭೂತಿಯ ಬಿಂದುಗಳ ಒಂದು ಹೆಣಿಗೆ ಅವನಲ್ಲಿ ಸೃಷ್ಟಿಯಾಗುತ್ತದೆ.

ಪುರಂದರ ದಾಸರಂಥ ಒಬ್ಬ ಅನುಭಾವಿ, ಷೇಕ್ಸ್‌ಪಿಯರನಂಥ ಒಬ್ಬ ಕವಿ-ನಾಟಕಕಾರ, ಮೈಕೆಲ್ ಏಂಜಲೋನಂಥ ಒಬ್ಬ ಕಲಾವಿದ, ಜಕ್ಕಣನಂಥ ಒಬ್ಬ ಶಿಲ್ಪಿ, ಮಹಮ್ಮದ್ ರಫಿಯಂಥ ಒಬ್ಬ ಹಾಡುಗಾರ ಹೇಗೆ ಸೃಷ್ಟಿಯಾದ ಎಂದು ನಾವು ಕಂಡುಕೊಳ್ಳಬೇಕು. ಆಗ ನಮಗೆ ಇಂಥ ಸೃಷ್ಟಿಯ ಹಿಂದಿರುವ ಕ್ರಿಯೆ ಅರ್ಥವಾಗುತ್ತದೆ. ನಿಸರ್ಗದಲ್ಲಿ ಕೂಡ ಹೀಗೆಯೇ. ಒಂದು ಗಿಡ ಆಗುವುದು ಹೇಗೆ? ಒಂದು ಹೂ ಆಗುವುದು ಹೇಗೆ? ಹುಟ್ಟಿನಲ್ಲಿ ಯಾವುದೂ ಏನೂ ಆಗಿರುವುದಿಲ್ಲ. ಯಾವುದು ಏನು ಎಂದು ತಿಳಿಯುವುದಿಲ್ಲ.

**ಚಿಂತನೆ-ನಾದ**

ವಿಜ್ಞಾನದ ಪಾಶ್ಚಿಮಾತ್ಯ ವಸ್ತು ವಿಶ್ಲೇಷಣಾ ವಿಧಾನದ ನೆರವಿಲ್ಲದೆ, ವೈಜ್ಞಾನಿಕ ವಿಧಾನಕ್ಕೂ ಮೀರಿದ ಗಾಢ ಚಿಂತನೆಯ ಮೂಲಕ ವೈಜ್ಞಾನಿಕ ಸತ್ಯವನ್ನು ಓದು ಬರಹವಿಲ್ಲದವರಿಗೆ ಸಹ ತಟ್ಟನೆ ಮನದಟ್ಟಾಗುವ ಭಾಷೆಯಲ್ಲಿ ಹೇಳಿದವರು ನಮ್ಮ ಅನುಭಾವಿಗಳು-ಕನಕದಾಸರು, ಪುರಂದರ ದಾಸರು, ಸರ್ವಜ್ಞ, ಬಸವಣ್ಣ ಮುಂತಾದವರು. ಮಾನವನದು ಕೇವಲ ಮೂರು ದಿನದ ಬಾಳುವೆ ಎಂದರೆ ಬಾಲಕನಿಗೆ ಅರ್ಥವಾಗುವುದಿಲ್ಲ. ಕಾಲೇಜು ಓದುತ್ತಿರುವ ವಿದ್ಯಾರ್ಥಿಗೂ ಸರಿಯಾದ ಅರಿವುಂಟಾಗದು. ಎಲ್ಲಾ ಅಧ್ಯಾಪಕರಿಗೂ ಅರ್ಥವಾಗುತ್ತದೆ ಎನ್ನುವಂತಿಲ್ಲ. ಬದುಕು ಇನ್ನೂ ಬಹಳಷ್ಟಿದೆ ಎಂದುಕೊಳ್ಳುತ್ತಾ ಅರುವತ್ತು-ಎಪ್ಪತ್ತನೆಯ ವರ್ಷದಲ್ಲಿ ಕೂಡ ಲಾಭ ತರುವ ಯೋಜನೆಗಳಲ್ಲಿ ಬಂಡವಾಳ ಹೂಡಿ ರಾತ್ರಿ ಹಗಲು ನಿದ್ರೆಯಿಲ್ಲದೆ ತೊಳಲಾಡುವವರಿಗೂ ಅರ್ಥವಾಗುವುದಿಲ್ಲ. ವಾನಪ್ರಸ್ಥಕ್ಕೆ ಹೋಗಬೇಕಾದ ಹೊತ್ತಿನಲ್ಲಿಯೂ, ಎಲ್ಲಾ ಇದ್ದೂ ಕೀರ್ತಿಯಿಲ್ಲವಲ್ಲಾ ಎಂದು ಕೀರ್ತಿಗಾಗಿ ತಲೆ ಕೆಳಗೆ ಕಾಲು ಮಾಡುವವರಿಗೂ ಅರ್ಥವಾಗುವುದಿಲ್ಲ. ವಾಸ್ತವದಲ್ಲಿ ಬದುಕು ಕೇವಲ ಮೂರು ದಿನ ಎಂಬ ಅರಿವಿನಲ್ಲಿಯೇ ಬದುಕಿನ ಸಂತೋಷ ಮತ್ತು ಆ ಸಂತೋಷವನ್ನು ಅನುಭವಿಸುವ ಧೀಮಂತಿಕೆ ಬರುವುದು. ಒಂದೊಂದು ವರ್ಷವೂ ಒಂದೊಂದು ಯುಗದಷ್ಟು ದೀರ್ಘವಿದೆ ಎಂದು ಭಾವಿಸುವವರು ಕೂಡ ಶಾಂತಿಯಿಂದ ಸಮಾಧಾನದಿಂದ ಇರುವಂತೆ, ಮೂರು ದಿನದ ಬಾಳುವೆ ಎಂದುಕೊಳ್ಳುವವನಿಗಿಂತ ತಾವು ಬಹಳ ಶ್ರೇಷ್ಠರು ಎಂಬಂತೆ ಜೀವಿಸುವುದನ್ನು ಕಾಣಬಹುದು. ಆದರೆ ಅವರ ಬದುಕುವ ಕ್ರಿಯೆಯಲ್ಲಿ ಭಯ ತುಂಬಿರುವುದನ್ನೂ ಕಾಣಬಹುದು. ಯಾವಾಗ ಅಪಾಯ ಬಂದೆರಗಿ ತಮ್ಮ ದೀರ್ಘವಾದ ಬದುಕು ಎಲ್ಲಿ ಮುಗಿದುಹೋಗುವುದೋ ಎಂಬ ಭಯ! ಬಹಳ ಮಂದಿ ಈ ಭಯದಲ್ಲಿ ಬದುಕಲರಿಯದೆ, ಹೆಬ್ಬಂಡೆಗಳಂತೆ, ಸಾವು ಇಲ್ಲ ಎಂಬಂತೆ ಬದುಕುತ್ತಾರೆ. ಹೆಬ್ಬಂಡೆಯಲ್ಲಿ ಜೀವವಿಲ್ಲ. ಆದ್ದರಿಂದ ಕಂಪನವಿಲ್ಲ. ಆದ್ದರಿಂದ ನಾದವಿಲ್ಲ. ನಾದವಿಲ್ಲದಿದ್ದರೆ ಎಷ್ಟು ಎತ್ತರವಿದ್ದರೂ ಎಷ್ಟು ವಿಸ್ತಾರವಾಗಿದ್ದರೂ ಬದುಕು ಇಲ್ಲ.

ವಿಶ್ವ ಸುಂದರಿಯ ಭಾವಚಿತ್ರವನ್ನು ಸಾವಿರ ಪಟ್ಟು ಹಿಗ್ಗಿಸಿ ನೋಡಿದರೆ ಏನು ಕಾಣಿಸುತ್ತದೆ? ಒಂದಾನೆಯ ಚಿತ್ರವನ್ನು ಸಾವಿರ ಪಟ್ಟು ಹಿಗ್ಗಿಸಿ ನೋಡಿದರೆ ಏನು ಕಾಣಿಸುತ್ತದೆ? ಕೇವಲ ಚುಕ್ಕಿಗಳು. ಮಿಲಿಯಗಟ್ಟಲೆ ಚುಕ್ಕಿಗಳಿಂದ ಒಂದು ಚಿತ್ರವಾಗುತ್ತದೆ. ಅರ್ಥಾತ್ ಚಿತ್ರವೆಂದರೆ ಮಿಲಿಯಗಟ್ಟಲೆ ಚುಕ್ಕಿಗಳು. ಯಾವುದೇ ವಸ್ತುವೂ ಅಷ್ಟೇ; ಮಿಲಿಯಗಟ್ಟಲೆ ಅಣುಗಳು, ಪರಮಾಣುಗಳು. ಹೇಗೆ ವಿಶ್ವಸುಂದರಿಯ ಭಾವಚಿತ್ರದ ಚುಕ್ಕಿಯೊಂದರಲ್ಲಿ ಅವಳ ಸೌಂದರ್ಯ

ಕಾಣಿಸದೋ ಹಾಗೆಯೇ ಆನೆಯ ಒಂದು ಅಣುವಿನಲ್ಲಿ ಆನೆಯ ಗಾತ್ರ ಕಾಣಿಸದು. ಆದರೆ ಚುಕ್ಕಿಗಳಿಂದಲೇ ಚಿತ್ರ; ಆದುದರಿಂದ ಚಿತ್ರದಲ್ಲಿರುವುದು ಏನೋ ಅದು ಚುಕ್ಕಿಯಲ್ಲಿಯೂ ಇದೆ. ಅಣುವಿನಿಂದಲೇ ಆನೆ; ಆದುದರಿಂದ ಅಣುವಿನಲ್ಲಿ ಆನೆ ಇದೆ. ಚುಕ್ಕಿ ಚುಕ್ಕಿಗಳ ಸಂಬಂಧದಿಂದ ಚಿತ್ರ ನಿರ್ಮಾಣವಾಗುತ್ತದೆ. ಅಣು ಅಣುಗಳ ಸಂಬಂಧದಿಂದ ಆನೆ ನಿರ್ಮಾಣವಾಗುತ್ತದೆ. ಅಣು ರೇಣುಗಳಲ್ಲಿಯೂ ಪರಮಾತ್ಮನನ್ನು ಕಂಡ ದಾರ್ಶನಿಕ ಕಂಡದ್ದು ಇದೇ ಸತ್ಯವನ್ನು. ಈ ಚುಕ್ಕಿ ಅರ್ಥಾತ್ ಅಣು ಅಥವಾ ಪರಮಾಣು ದೃಶ್ಯಕ್ಕೆ ಸಂಬಂಧಿಸಿದ ಒಂದು ಚಿತ್ರದ್ದಾಗಿರಬಹುದು. ಶ್ರವಣಕ್ಕೆ ಸಂಬಂಧಿಸಿದ ಒಂದು ಧ್ವನಿಯದ್ದು ಆಗಿರಬಹುದು. ಹತ್ತು ಸಾವಿರ ಡೆಸಿಬಲಿನ ಒಂದು ಶಬ್ದ ನಮಗೆ ಕೇಳಿಸದು; ಮೈನಸ್ ಸಾವಿರ ಡೆಸಿಬಲಿನ ಶಬ್ದವೂ ನಮಗೆ ಕೇಳಿಸದು. ಹಾಗೆಯೇ ವಾಸನೆಗೆ ಸಂಬಂಧಿಸಿದ ಅನುಭವವನ್ನು ಕೂಡ ಈ ರೀತಿ ಪರಿಭಾವಿಸಬಹುದು. ರುಚಿ ಮತ್ತು ಸ್ಪರ್ಶಕ್ಕೆ ಸಂಬಂಧಿಸಿದ ಅನುಭವವನ್ನು ಕೂಡ ಈ ರೀತಿ ಪರಿಭಾವಿಸಬಹುದು. ಇವೆಲ್ಲವುಗಳ ಆಧಾರದಲ್ಲಿ ಮನಸ್ಸಿನಲ್ಲಿ ರೂಪುಗೊಳ್ಳುವ ಒಂದು ಭಾವ ಅಥವಾ ಯೋಚನೆಯನ್ನು ಕೂಡ ಹೀಗೆ ಪರಿಭಾವಿಸಬಹುದು.

ಒಂದು ವಸ್ತುವಿನ ಗಾತ್ರವನ್ನು ಸಾವಿರಾರು ಪಾಲು ಹಿಗ್ಗಿಸಿದಾಗ ಆ ವಸ್ತು ನಮಗೆ ಕಾಣಿಸದು. ಸಾವಿರಾರು ಬಾರಿ ಕುಗ್ಗಿಸಿದಾಗಲೂ ಕಾಣಿಸದು. ಇದು ಪಂಚೇಂದ್ರಿಯಗಳ ಮೂಲಕ ನಾವು 'ಕಾಣು'ವ ಎಲ್ಲದಕ್ಕೂ ಅನ್ವಯಿಸುತ್ತದೆ.

ನಾವು ಬಹಳ ಸಲ ವಸ್ತುವನ್ನು ಕಾಣುವುದಿಲ್ಲ. ವಸ್ತು ವಸ್ತುಗಳ ನಡುವಿನ ಸಂಬಂಧವನ್ನು ಮಾತ್ರ ಕಾಣುತ್ತೇವೆ. ಗಾಳಿ ನಮಗೆ ಕಾಣಿಸುವುದಿಲ್ಲ. ಗಾಳಿ ಬೀಸುವುದನ್ನು ಇತರ ಆಧಾರಗಳಿಂದ 'ಕಾಣು'ತ್ತೇವೆ. ಬೆಳಕನ್ನು ನಾವು ಕಾಣುವುದಿಲ್ಲ. ಬೆಳಗಲ್ಪಟ್ಟ ವಸ್ತುವನ್ನು ಕಾಣುತ್ತೇವೆ. ಶಬ್ದವನ್ನು ಶ್ರವಣೇಂದ್ರಿಯದ ಮೂಲಕ ಗ್ರಹಿಸುತ್ತೇವೆ. ಶ್ರವಣಕ್ಕೆ ಕಾರಣವಾದ ಕಂಪನ ನಮಗೆ ಅಗ್ರಾಹ್ಯ. ರುಚಿ ಮತ್ತು ಸ್ಪರ್ಶ ನಮ್ಮ ಅನುಭವಕ್ಕೆ ಬರುತ್ತದೆ. ಅದಕ್ಕೆ ಕಾರಣವಾದ ದ್ರವ್ಯ ನಮಗೆ 'ಕಾಣಿಸು'ವುದಿಲ್ಲ.

ನಮಗೆ ಕಾಣಿಸದುದರ ಬಗ್ಗೆ ಕಂಡಿದ್ದೇವೆ ಅಥವಾ ಕಾಣಿಸುತ್ತಿದೆ ಎಂಬಂತೆ ಮಾತಾಡುವುದಕ್ಕಿಂತ ದೊಡ್ಡ ಮೂರ್ಖತನದ ಮಾತು ಬೇರೆ ಇರಲಿಕ್ಕಿಲ್ಲ. ಅಂಥ ಮೂರ್ಖತನದ ಮಾತನ್ನು ನಂಬುವುದು ಮತ್ತು ಅಂಥ ಮಾತು ಆಡುವವರನ್ನು ದೇವರೆಂದುಕೊಳ್ಳುವುದು ಪರಮಾವಧಿ ಮೂರ್ಖತನಕ್ಕೆ ಪುರಾವೆಯಾದೀತು ಅಷ್ಟೆ. "ದೇವರು ಇಲ್ಲದಿದ್ದರೆ ಬೇಡ ಒಂದು ಶಕ್ತಿ ಉಂಟಲ್ಲ? ಎಲ್ಲಕ್ಕಿಂತ ದೊಡ್ಡ ಒಂದು ಶಕ್ತಿ ಉಂಟಲ್ಲ?" ಎನ್ನುವವರಿಗೆ ತಾವು ಏನು ಹೇಳುತ್ತಿದ್ದೇವೆ, ಯಾಕೆ ಹಾಗೆ ಹೇಳುತ್ತಿದ್ದೇವೆ ಎಂದು ಗೊತ್ತಿರುವುದಿಲ್ಲ. ಪ್ರವಾಹದಲ್ಲಿ ಕೊಚ್ಚಿ ಹೋಗುತ್ತಿರುವಾಗ ಹಾವೋ ಹುಲ್ಲೋ ಎಂದು ತಿಳಿಯದೆ ಕೈಗೆ ಸಿಕ್ಕಿದ್ದನ್ನು ಹಿಡಿದುಕೊಳ್ಳುವಂತೆ, ಇಂಥ ವಾದಕ್ಕೆ ಬಲವಾಗಿ ಅಂಟಿಕೊಳ್ಳುತ್ತಾರೆ.

ಒಂದು ವಿಧದ ಶಕ್ತಿ ಇನ್ನೊಂದು ವಿಧದ ಶಕ್ತಿಯಾಗಿ ಬದಲಾಗುವುದನ್ನು ನಾವು ಕಾಣುತ್ತೇವೆ. ಆ ಬದಲಾವಣೆಯನ್ನು ನಾವು ಅರ್ಥ ಮಾಡಿಕೊಳ್ಳಬಲ್ಲೆವು. ದೇವರು ಎಂಬ ದೊಡ್ಡ ಶಕ್ತಿ ಉಂಟು ಅಂತ ಹೇಳಿ ಏನಾಗಬೇಕು, ಇಲ್ಲ ಅಂತ ಹೇಳಿ ಏನಾಗಬೇಕು? "ವಿಶ್ವಕ್ಕೊಂದು ಕೊನೆ ಉಂಟಲ್ಲ?"

ಎಂದಂತೆ! ಅದು ನಮಗೆ ಅಗ್ರಾಹ್ಯವಾದುದರಿಂದ ಬೇಕಾದಷ್ಟು ಕಲ್ಪನೆಗೆ, ಕೊನೆಯಿರದ ಮಾತಿಗೆ ಮಾತ್ರ ಅವಕಾಶ ಇದೆ. ಕೆಲವೊಮ್ಮೆ ಮಾತೇ ಅರಿವಿಗೆ ಅಡ್ಡಿಯಾಗುತ್ತದೆ.

ಅಣುವನ್ನು ನಾವು ಕಾಣುವುದು ಅಣು ಮತ್ತು ಅಣುವಿನ ನಡುವಿನ ಸಂಬಂಧದ ಪರಿಣಾಮದಲ್ಲಿ. ಆ ಸಂಬಂಧ ಆಕರ್ಷಿಸುವ ಅಥವಾ ವಿಕರ್ಷಿಸುವ ಸಂಬಂಧವಾಗಿರುತ್ತದೆ. ಅಣು ಅಣುವಿನ ನಡುವಿನ ಫ್ಯೂಶನ್ ನಮಗೆ ಕಾಣಿಸುವುದಿಲ್ಲ. ನಮಗೆ ಕಾಣಿಸುವುದು ಅದರ ಪರಿಣಾಮ ಮಾತ್ರ. ಹಾಗೆಯೇ ಎಕ್ಸ್‌ಪ್ಲೋಷನ್ ಕೂಡ ನಮಗೆ ಕಾಣಿಸುವುದಿಲ್ಲ. ನಮಗೆ ಕಾಣಿಸುವುದು ಅಣು ಮತ್ತು ಅಣುವಿನ ನಡುವೆ ನಡೆದ ಎಕ್ಸ್‌ಪ್ಲೋಷನ್‌ನ ಪರಿಣಾಮ.

ಅಣುವಿನ ಗಾತ್ರದಿಂದ ತೊಡಗಿ ನಮ್ಮ ಅಳತೆಗೆ ಸಿಲುಕದ ನಕ್ಷತ್ರದ ಗಾತ್ರದವರೆಗೆ ಪ್ರತಿಯೊಂದು ವಸ್ತುವನ್ನೂ ನಾವು ಪರಿಭಾವಿಸುವುದು ನಮ್ಮ ಕಣ್ಣಳತೆಗೆ ಅಥವಾ ಮನಸ್ಸಿನ ಅಳತೆಗೆ ನಿಲುಕುವ ಒಂದು ಪರಿಮಾಣದಲ್ಲಿ. ಇದು ಒಂದು ನಿರ್ದಿಷ್ಟವಾದ ಪರಿಮಾಣದಲ್ಲಿರುವ ಅಳತೆ. ಅದು ಆ ಅಳತೆಗಿಂತ ಹಿರಿದಾದರೂ ನಮಗೆ ಕಾಣಿಸುವುದಿಲ್ಲ, ಕಿರಿದಾದರೂ ಕಾಣಿಸುವುದಿಲ್ಲ. ಸಾವಿರಾರು ಚದರ ಕಿಲೋಮೀಟರ್ ವಿಸ್ತೀರ್ಣದ ಒಂದು ಗುಲಾಬಿ ಹೂವನ್ನು ಅಥವಾ ಭೂಮಿ ಗಾತ್ರದ ಒಂದು ಸೇಬು ಹಣ್ಣನ್ನು ನಮ್ಮಿಂದ ಕಲ್ಪಿಸಿಕೊಳ್ಳಲಿಕ್ಕಾಗುವುದಿಲ್ಲ. ಹಾಗೆಯೇ ಒಂದು ಸಾಸಿವೆ ಕಾಳಿನ ಸಾವಿರ ಪಟ್ಟು ಚಿಕ್ಕದಾದ ಗುಲಾಬಿ ಹೂವನ್ನು ಅಥವಾ ಸೇಬು ಹಣ್ಣನ್ನು ನಮ್ಮಿಂದ ಕಲ್ಪಿಸಿಕೊಳ್ಳಲಿಕ್ಕಾಗುವುದಿಲ್ಲ.

ನಮ್ಮ ಬರಿಗಣ್ಣಿಗೆ ಕಾಣಿಸುವ ಒಂದು ಚುಕ್ಕಿ ಅಗಣಿತ ಚುಕ್ಕಿಗಳು ಸೇರಿ ಆಗಿರುತ್ತದೆ. ನಮಗೆ ಕಾಣಿಸುವ ಚುಕ್ಕಿ ಯಾವುದು ಅಂದರೆ, "ನಮಗೆ ಕಾಣಿಸುವ ಚುಕ್ಕಿ". ಕಾಣಿಸದ ಚುಕ್ಕಿಗಳಿವೆ. ನಮಗೆ ಕೇಳಿಸುವ ಒಂದು ದನಿ ನಮಗೆ ಕೇಳಿಸುವ ಸ ರಿ ಗ ಮ ಪ ದ ನಿ. ಅದು ಒಂದು ಪಕ್ಷಿಯ ಉಲಿ. ಒಂದು ನೋಟ. ಹಾಗೆಯೇ ನಮಗೆ ಕೇಳಿಸದ್ದು ಇದೆ. ಹಾಗೆಯೇ ಸ್ಪರ್ಶಕ್ಕೆ ಅತೀತವಾದುದಿದೆ. ಘ್ರಾಣಕ್ಕೆ ಅತೀತವಾದುದಿದೆ. ಇಲ್ಲವೆಂದು ನಾವು ಹೇಳಿದ್ದು ಕೂಡ ಇದೆ. ಕಂಡಷ್ಟೂ ಇದೆ. ಇನ್ನಿಲ್ಲವೆನಿಸುತ್ತದೆ. ಆದರೆ, ಮತ್ತೂ ಇದೆ. ಅದು ಏನು ಎಂದು ಅದನ್ನು ಕಾಣದೆ ಇಂಥದೇ ಎನ್ನುವುದು ಹುಂಬತನವಲ್ಲವೆ ? ಕನಿಷ್ಠ ಪಕ್ಷ ಒಂದು ಹೈಪೊಥೀಸಿಸನ್ನಾದರೂ ಮಾಡುವ ಪ್ರಯತ್ನ ಮಾಡಬೇಕು. ಬರಿದೆ ನಂಬುವುದು, ನಂಬಿಸಲೆತ್ನಿಸುವುದು ಅಧರ್ಮವೆನಿಸೀತು!

## ಭಾಷೆ-ನಾದ

ಸಂಗೀತದಲ್ಲಿರುವ ನಾದ ಬೇರೆ, ಶಬ್ದದ ಅರ್ಥದಲ್ಲಿರುವ ನಾದ ಬೇರೆ. ಒಂದಿಲ್ಲದೆ ಇನ್ನೊಂದಿರಲು ಸಾಧ್ಯ. ಎರಡೂ ಸೇರಿದ್ದು ಕಾವ್ಯ ಎನಿಸಿಕೊಳ್ಳುತ್ತದೆ. ಬರೀ ಸರಿಗಮ ಪದನಿಸ ಹಾಡಾಗಬಹುದು. ಭೀಮಸೇನ ಜೋಷಿ ಐದು ನಿಮಿಷ ಬರೀ ವಿಠ್ಠಲ ಎಂಬ ಶಬ್ದವನ್ನೇ ಹಾಡಾಗಿಸಿ ಕೇಳುಗರ ಮೈಮರೆಸುತ್ತಾರೆ. ನಮಗೆ ಗೊತ್ತಿಲ್ಲದ ಒಂದು ಭಾಷೆಯಲ್ಲಿನ ಒಂದು ಶ್ರೇಷ್ಠವಾದ ಕವಿತೆಯನ್ನು ಉತ್ಕೃಷ್ಟವಾಗಿ ಹಾಡಿದ್ದು ನಮಗೆ ಕೇವಲ ಹಾಡಾಗಿರುತ್ತದೆ. ಅದು ನಮಗೆ ಕವಿತೆಯಾಗದು.

ಆ್ಯನ ಎಂಬ ಇಂಗ್ಲಿಷ್ ಕವಯಿತ್ರಿ ತನ್ನ "ಹರ್ ವರ್ಡ್ಸ್" ಎಂಬ ಕವನದಲ್ಲಿ :

ತಾರೆ ಮುಗಿಲು ಹಕ್ಕಿಗಳದೊಂದು
ಸೌಂದರ್ಯ ಜಾಲವನು ದೇವ ನೇದ;
ಆದರೆ ಅವುಗಳಿಗಿಂತ ಸುಂದರ ಶಬ್ದಗಳು
ಅವುಗಳನವನು ಮಾಡದೆ ಹೋದ

ಎನ್ನುತ್ತಾಳೆ. ಸಪ್ತ ಧ್ವನಿಗಳ ನಾದದಿಂದ ಸಂಗೀತವಾಗುತ್ತದೆ. ಸಪ್ತವರ್ಣಗಳ ನಾದದಿಂದ ಚಿತ್ರವಾಗುತ್ತದೆ. ಶಬ್ದದಲ್ಲಿ ನಾವು ಕಾಣುವ ಅರ್ಥ ಕಾವ್ಯ. ನಾದ ಅದರ ದೇಹ. ಕಾವ್ಯವನ್ನು ಅರ್ಥ ಮಾಡಿಸುವುದು ಕಷ್ಟ. ಕಾವ್ಯ ಅರ್ಥ ಆಗಬೇಕು. ಅರ್ಥವಾಗುವಿಕೆ ನಮ್ಮ ಅಂತರಾಳದಲ್ಲಿ ನಡೆಯುವ ಕ್ರಿಯೆ. ಅದನ್ನೇ ಅನುಭೂತಿ ಎನ್ನುವುದು. ಅದೇ ಕವಿ "ಅಭಿರಾಮತರ"ವೆಂದು ಹೇಳುವ ಅಶ್ರುತ ನಾದ. ಅಭಿರಾಮ ಶ್ರುತವಾದ ಸಂಗೀತ ನಮ್ಮ ಶ್ರವಣೇಂದ್ರಿಯಗಳಿಗೆ ಗಮ್ಯವಾದ, ಅಂದರೆ, ಒಂದರ್ಥದಲ್ಲಿ ಮೂರ್ತವಾದ ಅನುಭವವನ್ನು ನೀಡುವ ಕ್ರಿಯೆ. ಅದು ಮತ್ತು ಇದು ಒಂದಕ್ಕೊಂದು ಪೂರಕವಾಗಬಹುದು.

ಬೈರನ್‌ನ "ಡಾನ್ ಜುವಾನ್" ಕವಿತೆಯಲ್ಲಿ ಈ ಸಾಲುಗಳಿವೆ :

ಸಂಗೀತವಿದೆ ಹುಲ್ಲುಕಡ್ಡಿಗಳ ನಿಟ್ಟುಸಿರಿನಲ್ಲಿ
ಸಂಗೀತವಿದೆ ಝರಿಯ ಚಿಮ್ಮುವಿಕೆಯಲ್ಲಿ
ಸಂಗೀತವಿದೆ ಕಿವಿಯಿದ್ದರೆ ಮನುಷ್ಯರಿಗೆ;
ಅವರ ಬುವಿ ಕೂಡ ಅಂತರಿಕ್ಷಕಾಯಾಕಾಯಗಳ
ಪರಿಭ್ರಮಣ ಸಂಗೀತದೊಂದು ಪ್ರತಿಧ್ವನಿ ಮಾತ್ರ.

ಒಬ್ಬಳು ಹುಡುಗಿ 'ಬಾರಿಸು ಕನ್ನಡ ಡಿಂಡಿಮವ' ಎಂಬ ಹಾಡನ್ನು ಅದ್ಭುತವಾಗಿ ಹಾಡುತ್ತಾಳೆ. ಕೇಳಿದವರು ರೋಮಾಂಚನಗೊಳ್ಳುತ್ತಾರೆ. ಒಬ್ಬರು ತಮ್ಮ ಪಕ್ಕದಲ್ಲಿ ಕುಳಿತವರೊಡನೆ ಹೇಳುತ್ತಾರೆ. "ಎಷ್ಟು ಚೆನ್ನಾಗಿ ಹಾಡಿದ್ದಾಳೆ ಹುಡುಗಿ! ಏನು ತಾದಾತ್ಮ್ಯ!" ಅವರ ಪಕ್ಕದಲ್ಲಿ ಕುಳಿತವರು ಕೂಡ ಹಾಡನ್ನು ಸವಿದಿದ್ದಾರೆ. ಆದರೆ ಅವರಿಗೇಕೋ ರೋಮಾಂಚನವಾಗಿಲ್ಲ. ಅವರು ಹೇಳುತ್ತಾರೆ, "ಅವಳಿಗೆ ಕನ್ನಡ ಸರಿಯಾಗಿ ಬಾರದು. ಸುಮ್ಮನೆ ಹಾಡಿದ್ದಾಳೆ. ಹಾಡಿನ ಅರ್ಥ ಅವಳಿಗೆ ಗೊತ್ತಿಲ್ಲ."

ಗಾಯಕ ನಾದದೊಂದಿಗೆ ತಾದಾತ್ಮ್ಯ ಹೊಂದಬಹುದು. ಆದರೆ ಅವನಿಗೆ ತಾನಾಡುವ ಪದಗಳ ಅರ್ಥ ಗೊತ್ತಿದ್ದರೆ ಆ ತಾದಾತ್ಮ್ಯ ಇನ್ನೂ ಒಂದು ಮಜಲು ಮುಟ್ಟಬಹುದು. ಆ ತಾದಾತ್ಮ್ಯ ಕೇಳುಗರನ್ನು ಕೂಡ ತಟ್ಟಬಹುದು. ಶಬ್ದಗಳು ಕೇವಲ ಶಬ್ದಗಳಲ್ಲ. ಶಬ್ದಗಳು ಪ್ರತೀಕಗಳು. ಅವುಗಳ ಹಿಂದೆ ಒಂದು ಜಗತ್ತು ಇದೆ. ಆ ಜಗತ್ತನ್ನು ತಿಳಿಯಲು ನಮ್ಮ ಎಲ್ಲಾ ಜ್ಞಾನೇಂದ್ರಿಯಗಳೂ ಬೇಕು. ಎಲ್ಲ ಜ್ಞಾನೇಂದ್ರಿಯಗಳಿಗೂ ಒಳ್ಳೆಯ ಸಂವೇದನಾಶಕ್ತಿಯಿರಬೇಕು. ಎಲ್ಲವೂ ಸಮರ್ಪಕವಾಗಿ ಕೆಲಸ ಮಾಡಬೇಕು. ಹಾಗಿದ್ದರೆ ಮಾತ್ರ ಅರ್ಥ ಮತ್ತು ನಾದ ಎರಡೂ ಕಾಣಿಸುತ್ತದೆ.

ಚುಕ್ಕಿಗಳಲ್ಲಿ ಚಿತ್ರವಿದೆ. ಆದರೆ ಚುಕ್ಕಿಯೇ ಚಿತ್ರವಲ್ಲ. ಚುಕ್ಕಿಗಳು ನಾದಜಾಲವಾಗಿ ಚಿತ್ರವಾಗುತ್ತದೆ. ಚಿತ್ರವಾದ ಮೇಲೆ ಚುಕ್ಕಿಗಳು ಕಾಣಿಸುವುದಿಲ್ಲ, ಚಿತ್ರ ಮಾತ್ರ ಕಾಣಿಸುತ್ತದೆ.

ಆದರೆ ಚುಕ್ಕಿಗಳು ಚಿತ್ರವಾಗುವ ಪರಿ ಕಾಣಿಸುವುದಿಲ್ಲವೆ? ಕಾಣಿಸುತ್ತದೆ ಕಣ್ಣುಗಳಿದ್ದರೆ, ಕೇಳಿಸುತ್ತದೆ ಕಿವಿಗಳಿದ್ದರೆ ಎನ್ನುತ್ತಾನೆ ಕವಿ.

ಟೆನ್ನಿಸನ್ ಹೇಳುತ್ತಾನೆ, "ಮೆಲಡಿ ಹರ್ಡ್ ಈಸ್ ಸ್ವೀಟ್, ಮೆಲಡಿ ಅನ್‌ಹರ್ಡ್ ಈಸ್ ಸ್ವೀಟರ್". ಕವಿ ಡಿ.ವಿ. ಗುಂಡಪ್ಪಗೆ ಬೇಲೂರಿನ ಶಿಲಾಬಾಲಿಕೆ ಸರಸ್ವತಿಯ ವೀಣಾನಾದ ಕೇಳಿಸುತ್ತದೆ, "ಶ್ರುತಗಾನಮಭಿರಾಮಮಾದೊಡಶ್ರುಗಾನಭಿರಾಮತರ" ಎನ್ನುತ್ತಾರೆ.

ಅಪರಿಮಿತ ಸಂಖ್ಯೆಯ ಚುಕ್ಕಿಗಳು ಸೇರಿ ಒಂದು ಚಿತ್ರವಾಗುತ್ತದೆ. ಕಣ್ಣಿಗೆ ಕಾಣಿಸಿದ್ದು ಸುಂದರವೆನಿಸುವುದು ಅದು ಕಣ್ಣಿಗೆ ಸಿಲುಕುವ ಅಳತೆಯಲ್ಲಿದ್ದಾಗ ಮಾತ್ರ. ಹಾಗೆಯೇ, ಕಿವಿಗೆ ಕೇಳಿಸಿದ್ದು ಮಧುರವೆನಿಸುವುದು, ನಾಲಿಗೆ ಸವಿದದ್ದು ರುಚಿಕರವೆನಿಸುವುದು, ಸ್ಪರ್ಶಿಸಿದ್ದು ಹಿತಕರವೆನಿಸುವುದು ಎಲ್ಲವೂ ಒಂದು ನಿರ್ದಿಷ್ಟ ಅಳತೆಯಲ್ಲಿದ್ದಾಗ ಮಾತ್ರ.

ಕವಿತೆ ಏನು? ಮಗುವಿನ ಅಳು, ಜನಪದದ ಹಾಡಿನ ಹುಟ್ಟಿನ ಮೂಲದಲ್ಲಿರುವ ನೋವು, ಬಣ್ಣ ಕುಂಚ ಹುಟ್ಟುವ ಮೊದಲು ಮನಸ್ಸಿನಲ್ಲಿದ್ದ ಚಿತ್ರ, ಶಿಲ್ಪಿಯ ಮನಸ್ಸಿನಲ್ಲಿದ್ದ ಶಿಲ್ಪದ ಸ್ವರೂಪ, ವರ್ಣಾಕ್ಷರಗಳು ಹುಟ್ಟುವ ಮೊದಲಿದ್ದ ಸ್ವರಾಕ್ಷರಗಳು. ಭಾಷೆ ಭಾಷೆಯೆನಿಸಿಕೊಳ್ಳುವ ಮೊದಲು, ಭಾಷೆಯ ಉಗಮ ಕಾಲದಲ್ಲಿ ಇದ್ದಂಥ ಕೇವಲ ಧ್ವನಿಗಳು. ಎಲ್ಲವೂ ಕವಿತೆ. ಅವೆಲ್ಲ ಮತ್ತೆ ಕವಿತೆಯಾಳದ ಅಗೋಚರ ಬಿಂದುಗಳು. ಯಾವುದೂ ಎಲ್ಲಿಗೂ ಹೋಗುವುದಿಲ್ಲ. ಎಲ್ಲವೂ ಇರುತ್ತದೆ.

ಜೀವ ಏನು, ಜೀವ ಎಲ್ಲಿರುತ್ತದೆ? ಜೀವ ಒಂದು ಚುಕ್ಕಿ. ಅದು ಎಲ್ಲಿರುತ್ತದೆ? ನಮ್ಮ ಉಸಿರಿನಲ್ಲಿ? ರಕ್ತದಲ್ಲಿ?

ಸಾವು ಏನು? ಸಾವಿನಲ್ಲಿ ಕೊನೆಯಾಗುವ ಜೀವ ಏನು?

ಮನಸ್ಸು ಎಲ್ಲಿರುತ್ತದೆ? ಮನಸ್ಸು ತಲೆಚಿಪ್ಪಿನೊಳಗಿರುತ್ತದೆಯೆ? ಮನಸ್ಸು ಒಳಗೇ ಇರುವುದಿಲ್ಲ ಅಥವಾ ಹೊರಗೇ ಇರುವುದಿಲ್ಲ. ನಾನು ಎಂಬ ಭಾವ ಮನಸ್ಸಿನಲ್ಲಿರುತ್ತದೇನೊ ನಿಜ. ಆದರೆ ಪಂಚೇಂದ್ರಿಯಗಳು ನಿರಂತರವಾಗಿ ಗ್ರಹಿಸುತ್ತಿರುವುದು ಮತ್ತು ಮಿದುಳಿನಲ್ಲಿ ನಡೆಯುವ ಯೋಚನೆ ಎಲ್ಲವೂ ಒಟ್ಟು ಸೇರಿ ಮನಸ್ಸು ಎನಿಸಿಕೊಳ್ಳುತ್ತದೆ. ಅದು ಒಳಗೂ ಇರುತ್ತದೆ, ಹೊರಗೂ ಇರುತ್ತದೆ.

ಎಲ್ಲಿಯೋ ಹುಟ್ಟಿದ ಎರಡು ಮನಸ್ಸುಗಳು ಒಂದಾಗುವುದು ವಿಚಿತ್ರವೆನಿಸುವುದಿಲ್ಲವೆ? ಆ ಎರಡು ಮನಸ್ಸಿನಲ್ಲಿ ಹುಟ್ಟುವ ಸಮರಸದ ನಾದದ ಸ್ವರೂಪ ಏನು? ಆಕರ್ಷಣೆ ಏನು?

ಹಾಗೆ ಒಂದಾದ ಮನಸ್ಸುಗಳು ಮತ್ತೆ ಬೇರೆ ಬೇರೆಯಾಗುವುದು ಕೂಡ ವಿಚಿತ್ರವೇ ಅಲ್ಲವೆ? ಸ್ನೇಹಿತರೇಕೆ ಅಗಲುತ್ತಾರೆ? ಸತಿಪತಿಯರೇಕೆ ವಿಚ್ಛೇದನ ಬಯಸುತ್ತಾರೆ? ಸಾಮರಸ್ಯ ಉಂಟು ಮಾಡುವುದು ಏನು? ಸಂಘರ್ಷ ಉಂಟು ಮಾಡುವುದು ಏನು?

ಒಬ್ಬ ಮನುಷ್ಯ ಇನ್ನೊಬ್ಬ ಮನುಷ್ಯನ ಬಗ್ಗೆ ಮನಸ್ಸಿನಲ್ಲಿ ಧರಿಸುವ ಭಾವನೆ ಒಂದು ನಿರ್ದಿಷ್ಟ ಸ್ವರೂಪದ ಚಿತ್ರ. ಸಾಮರಸ್ಯವೆಂದರೆ ಎರಡು ನಿರ್ದಿಷ್ಟ ಸ್ವರೂಪದ ಚಿತ್ರಗಳು ಒಂದನ್ನೊಂದು ನೀಸಿಲ್ಲದಿದ್ದರೆ ನಾನಿಲ್ಲ ಎಂಬಂತೆ ಅಂಟಿಕೊಳ್ಳುವುದು. ಇಬ್ಬರ ನಡುವೆ ತಿಕ್ಕಾಟ ಅಂದರೆ ಈ

ಚಿತ್ರಗಳ ನಡುವಿನ ತಿಕ್ಕಾಟ. ಹೀಗಲ್ಲದೆ, ನಿರ್ದಿಷ್ಟ ಸ್ವರೂಪವಿಲ್ಲದೆ, ಅಂಟಿಕೊಳ್ಳದೆ ಕೇವಲ ಎರಡು ಮನುಷ್ಯರ ನಡುವೆ ಸಹಸ್ಪಂದನ ಸಾಧ್ಯವಿದೆ. ಆಕಾಶದಲ್ಲಿರುವ ನಕ್ಷತ್ರಗಳಂತೆ ನಡುವೆ ಸಾವಿರಾರು ಮೈಲಿಗಳ ಅಂತರವಿದ್ದೂ ಒಂದನ್ನೊಂದು ಹಿಡಿದುಕೊಂಡು ಇರಲು ಸಾಧ್ಯವಿಲ್ಲವೆ? ವಿಶ್ವದಲ್ಲಿರುವ ಎಲ್ಲಾ ಆಕಾಶಕಾಯಗಳು ಇರುವುದು ಹೀಗೆಯೇ ಅಲ್ಲವೆ? ಗಾಳಿ, ನೀರು, ಕಲ್ಲು, ಮಣ್ಣು ಮುಂತಾದ ಸಕಲ ವಸ್ತುಗಳೂ ಅವುಗಳಿರುವಂತೆ ಇರುವುದು ಹೀಗೆಯೇ ಅಲ್ಲವೆ?

## ವಿಜ್ಞಾನ-ನಾದ

ಹತ್ತು ಲಕ್ಷಕೋಟಿ ಜೀವಕೋಶಗಳ ಜೋಡಣೆಯಿಂದ ನಮ್ಮ ದೇಹ ಉಂಟಾಗಿದೆ. ಪ್ರತಿಯೊಂದು ಕೋಶದಲ್ಲಿಯೂ ಜೀವವಿದೆ. ಪ್ರತಿಯೊಂದು ಕೋಶದಲ್ಲಿಯೂ ಒಂದು ನ್ಯೂಕ್ಲಿಯಸ್ ಅರ್ಥಾತ್ ಕೋಶಕೇಂದ್ರವಿದೆ. ಈ ಕೋಶಕೇಂದ್ರದಲ್ಲಿ ತಂದೆಯಿಂದ ಬಂದಿರುವ ೨೩ ಮತ್ತು ತಾಯಿಯಿಂದ ಬಂದಿರುವ ೨೩- ಹೀಗೆ ೨೩ ಜೊತೆ ವರ್ಣತಂತುಗಳು ಅರ್ಥಾತ್ ಕ್ರೊಮೊಸೋಮ್‌ಗಳು ಇವೆ. ಈ ವರ್ಣತಂತುವಿನಲ್ಲಿ ಸುರುಳಿ ಸುಳಿಯಾದ ಏಣಿಯಾಕಾರದಲ್ಲಿರುವ ಡಿ.ಎನ್.ಎ. ಗಳಿರುತ್ತವೆ. ಒಂದು ಡಿ.ಎನ್.ಎ. ಕಣವೇ ಜೀನ್. ನಮ್ಮ ದೇಹದ ಎತ್ತರ, ದಪ್ಪ, ಬಣ್ಣ, ರೂಪ, ನಮ್ಮ ಧ್ವನಿ, ಸ್ವಭಾವ, ಗುಣ, ಬುದ್ಧಿಮತ್ತೆ ಇತ್ಯಾದಿ ಎಲ್ಲವನ್ನೂ ನಿರ್ಧರಿಸುವುದು ಈ ಜೀನ್‌ಗಳು. ಹಾಗೆಂದು ಅವಷ್ಟೇ ಅಲ್ಲ. ನಾವು ಏನಾಗಿರುವೆವೋ ಅದನ್ನು ನಿರ್ಧರಿಸಿರುವುದು. ನಾವು ತಾಯಿಯ ಗರ್ಭದಿಂದ ಹೊರಬಿದ್ದ ಕ್ಷಣದಿಂದ ನಮ್ಮ ಮೇಲೆ ಆಗುವ ಹೊರ ಪ್ರಭಾವಗಳ ಪರಿಣಾಮ ಅದಕ್ಕಿಂತ ಕಡಿಮೆಯಾದುದೇನೂ ಅಲ್ಲ. ಪಂಚೇಂದ್ರಿಯಗಳ ಗ್ರಹಿಸುವ ಶಕ್ತಿ ಒಂದು ಮಹಾಶಕ್ತಿ! ಆದರೂ ಅದು ಅಂತರ್ವಿಶ್ವದ ಒಂದು ಬಿಂದು ಮಾತ್ರ! ಅವುಗಳಿಂದ ನಾವು ಗ್ರಹಿಸಿದ್ದು ಒಂದು ಮಹಾವಿಶ್ವ! ಆದರೂ ಅದು ಬಹಿರ್ವಿಶ್ವದ ಒಂದು ಬಿಂದು ಮಾತ್ರ!

ಈ ಡಿ.ಎನ್.ಎ. ಎಂಬುದರ ಮೂಲದ್ರವ್ಯ ಏನು? ಅದು ಪ್ರೊಟೀನ್. ಪ್ರೊಟೀನ್ ಅಂದುಬಿಟ್ಟರಾಗಲಿಲ್ಲ. ಎಲ್ಲಾ ಜೀನ್‌ಗಳ ಪ್ರೊಟೀನ್ ಒಂದೇ ಬಗೆಯದ್ದಲ್ಲ! ಪ್ರೊಟೀನಿನಲ್ಲಿ ವೈವಿಧ್ಯವಿದೆ. ಆದ್ದರಿಂದ ಜೀನ್‌ಗಳ ಗುಣಧರ್ಮವನ್ನು ಅರ್ಥ ಮಾಡಿಕೊಳ್ಳಬೇಕಾದರೆ, ವಿವಿಧ ಪ್ರೊಟೀನುಗಳ ಗುಣಧರ್ಮವನ್ನು ಅರ್ಥ ಮಾಡಿಕೊಳ್ಳಬೇಕು. ಅಂಥ ಪ್ರತಿಯೊಂದು ಪ್ರೊಟೀನಿನ ರಚನೆಯ ಸ್ವರೂಪ ಏನು? ಪ್ರೊಟೀನಿನಲ್ಲಿ ಏನೇನಿದೆ? ಅದರಲ್ಲಿ ಇನ್ನಾವ ನಾದ ಅಡಗಿದೆ?

ಒಂದು ಲಕ್ಷ ಕೋಟಿ ಜೀವಕೋಶಗಳ ರಚನೆಯಾಗಿರುವ ಸುಮಾರು ಐದೂವರೆ ಬಿಲಿಯನ್ ಮಾದರಿಗಳು ಈ ಜಗತ್ತಿನಲ್ಲಿ ಇವೆ. ಅವುಗಳಿಗೆ ಮನುಷ್ಯರು ಎಂದು ಹೆಸರು. ಅವುಗಳು ಒಂದರಂತೆ ಇನ್ನೊಂದಿಲ್ಲ. ಎಂಥ ಅದ್ಭುತ! ಜಗತ್ತಿನಲ್ಲಿ ಅಸಂಖ್ಯ ಜೀವವೈವಿಧ್ಯ ಇದೆ. ಪ್ರತಿಯೊಂದರ ಕುರಿತೂ ಇದೇ ರೀತಿ ಒಂದು ಜೀವಕೋಶ ಕಥೆಯಿದೆ. ಅವನ್ನೆಲ್ಲಾ ಅರ್ಥ ಮಾಡಿಕೊಳ್ಳಲಾದೀತೆ? ಎಲ್ಲಿ ನಿಲ್ಲುತ್ತದೆ ಅರ್ಥ ಮಾಡಿಕೊಳ್ಳುವ ಪ್ರಕ್ರಿಯೆ? ನಿಲ್ಲುವುದಿಲ್ಲ. ಚುಕ್ಕಿ ಚುಕ್ಕಿಗಳ, ಗೋಲಾಗೋಲಗಳ ಪರಿಭ್ರಮಣಾನುರಣನ ಸಂಗೀತ ಅವಿರತ, ಅನವರತ, ಅವಿಶ್ರಾಂತ.

ಪ್ರಶಾಂತವಾದ ಕಡಲ ನಡುವೆ ನೀವು ಒಂದು ನಾವೆಯಲ್ಲಿ ಕಣ್ಣು ಮುಚ್ಚಿ ಅಥವಾ ಮೋಡಗಳಿಲ್ಲದ ಆಕಾಶ ನೋಡುತ್ತಾ ಕುಳಿತಿದ್ದರೆ ನಾವೆ ಒಂದು ಕಡೆ ನಿಂತಿದೆಯೆ ಚಲಿಸುತ್ತದೆಯೆ ಎಂದು ನಿಮಗೆ ತಿಳಿಯುವುದಿಲ್ಲ. ಅದು ಚಲಿಸುತ್ತಿದೆ ಎಂದು ತಿಳಿಯಬೇಕಾದರೆ, ಆಕಾಶದಲ್ಲಿರುವ ಮೋಡದ ನೆರವು ಬೇಕು. ಅಥವಾ ಹತ್ತಿರದಲ್ಲಿ ಒಂದು ದ್ವೀಪ ಕಾಣಿಸಬೇಕು ಅಥವಾ ಕೆಳಬಗ್ಗಿ ನಾವೆ ಹಿಂದಕ್ಕೆ ತಳ್ಳುತ್ತಿರುವ ನೀರನ್ನು ನೋಡಬೇಕು. ವಿಮಾನ ಪ್ರಯಾಣದಲ್ಲಿಯೂ ಹೀಗೆಯೇ. ಅಲ್ಲಿ ನಮ್ಮ ತಿಳಿವಳಿಕೆಯೇ ನಮಗೆ ಹೇಳುತ್ತದೆ ವಿಮಾನ ಆಕಾಶದಲ್ಲಿ ಒಂದು ಕಡೆ ಸುಮ್ಮನೆ ನಿಂತಿರಲು ಸಾಧ್ಯವಿಲ್ಲ. ಅದು ಚಲಿಸುತ್ತಿರಬೇಕು ಎಂದು. ಆದರೆ ಮುಂಬೈಯಿಂದ ಲಂಡನಿಗೆ ಹಾರಿದ ವಿಮಾನ ಸ್ವಲ್ಪ ದೂರ ಹಾರಿದ ಮೇಲೆ ಯಾವುದೋ ಕಾರಣಕ್ಕೆ ವಾಪಾಸು ಬಂದು ಮುಂಬೈಗೇ ಹಾರತೊಡಗಿದರೆ ನಮಗದೇನೂ ತಿಳಿಯುವುದಿಲ್ಲ. ಎಲ್ಲಿಗೆ ಬಂದಿದ್ದೇವೆ ಎಂದು ತಿಳಿಯುವುದು "ನಾವೀಗ ಮುಂಬೈಯಲ್ಲಿದ್ದೇವೆ" ಎಂಬ ಉದ್ಘೋಷಕಯ ದನಿ ಕೇಳಿಸಿದ ಮೇಲೆಯೇ.

ವಿಶ್ವದಲ್ಲಿ ಪ್ರತಿಯೊಂದೂ ಚಲಿಸುತ್ತಿದೆ ಎಂದು ನಾವು ತಿಳಿದುಕೊಂಡಿದ್ದೇವೆ. ನಿಜ. ಯಾವುದೂ ಸ್ಥಾವರವಲ್ಲ. ಭೂಮಿ, ಸೂರ್ಯ ಎಲ್ಲವೂ ಚಲಿಸುತ್ತದೆ. ಆದರೆ ಎಲ್ಲಾ ಚಲನೆಯನ್ನೂ ನಾವು "ಕಾಣು"ವುದು ಆಧಾರಗಳ ಮೂಲಕ. ನಾವು ಕಾಣುವ ಇಡೀ ವಿಶ್ವವನ್ನು ಒಂದು ಚಿಪ್ಪಿಲ್ಲದ ಮೊಟ್ಟೆ ಅರ್ಥಾತ್ ಬ್ರಹ್ಮಾಂಡ ಅಂತ ಪರಿಭಾವಿಸುತ್ತೇವಲ್ಲ? ಇಂಥ ಅಸಂಖ್ಯ ಬ್ರಹ್ಮಾಂಡಗಳು ಒಂದು ಮಹಾ ಬ್ರಹ್ಮಾಂಡದೊಳಗೆ ಚಲಿಸುತ್ತಿರಲೇಬೇಕು! ಅಂಥ ಅಸಂಖ್ಯ ಮಹಾ ಬ್ರಹ್ಮಾಂಡಗಳು ಒಂದು ಮಹಾ ಬ್ರಹ್ಮಾಂಡದೊಳಗೆ ಚಲಿಸುತ್ತಿರಲೇಬೇಕು. ಅಂಥ ಅಸಂಖ್ಯ ಮಹಾ ಮಹಾ ಬ್ರಹ್ಮಾಂಡಗಳು ಒಂದು ಮಹಾ ಮಹಾ ಮಹಾ ಬ್ರಹ್ಮಾಂಡದೊಳಗೆ ಚಲಿಸುತ್ತಿರಬೇಕು! ಹೀಗೇ ಮತ್ತೆ....

ಈ ಚಲನೆಯ ಚಿತ್ರವನ್ನು ಕಲ್ಪಿಸಿಕೊಳ್ಳಲಾದೀತೆ? ಕಲ್ಪಿಸಿಕೊಳ್ಳಬೇಕಾದರೆ ನಾವು ಅನಂತವಾಗಿ ಒಂದು ಕಲ್ಪನಾಚಿಂತನೆಯಲ್ಲಿ ತೊಡಗಬೇಕಾಗುತ್ತದೆ. ನಾವು ಅನಂತವಲ್ಲವಾದುದರಿಂದ ಅದು ಸಾಧ್ಯವಿಲ್ಲ. ಚಿಂತನೆ ಸಾಧ್ಯ, ಒಂದು ಸೀಮೆಯ ತನಕ, ಸೀಮಾತೀತವಾಗಿ ಸಾಧ್ಯವಿಲ್ಲ.

## ಬದುಕು-ನಾದ

ಆಕರ್ಷಣೆ ವಿಕರ್ಷಣೆಯ ಸಮತೋಲನವಿಲ್ಲದೆ ಯಾವ ಸಂಬಂಧವೂ ಇಲ್ಲ. ಯಾವ ಅಸ್ತಿತ್ವವೂ ಇಲ್ಲ. ದೂರ ತಳ್ಳಿರಿಸುವ ಕ್ರಿಯೆಯ ಹಿಂದೆ ಭಯವಿದೆ. ಅಂಟಿಕೊಳ್ಳುವುದರ ಹಿಂದೆ ಭಯವಿದೆ. ನಕ್ಷತ್ರಗಳಂತೆ ಇರುವುದರಲ್ಲಿ ಭಯವಿಲ್ಲ. ಅದೇ ಭಯರಹಿತ ಬದುಕಿನ ಸಂಗೀತ. ಅತ್ಯಂತ ಸಂತೋಷದಾಯಕವಾದ, ಪರಿಪೂರ್ಣವಾದ ಸಂಬಂಧ ಯಾವುದು? ಸಂಬಂಧವಿಲ್ಲದಿರುವುದು! ಭಯರಹಿತ ಸ್ಥಿತಿಯಲ್ಲಿ ಮಾತ್ರ "ಸಂಬಂಧವಿಲ್ಲದಿರುವ ಈ ಸಂಬಂಧ" ಇರಲು ಸಾಧ್ಯ.

ಒಬ್ಬ ದಾರ್ಶನಿಕ, ಕವಿ ಅಥವಾ ವಿಜ್ಞಾನಿ ಹೇಳುವ ಸತ್ಯಗಳು ಅವನೊಬ್ಬನಿಗೇ ತಿಳಿದಿರುವ ಸತ್ಯಗಳೇನಲ್ಲ. ಇವೆಲ್ಲ ಬಹಳ ಮಂದಿ ಕಂಡಿರುವ, ಕಾಣುತ್ತಿರುವ ಸತ್ಯಗಳೇ ಆಗಿವೆ. ಆದರೆ ಎಲ್ಲರೂ ಎಲ್ಲವನ್ನೂ ಕಾಣುವುದಿಲ್ಲ. ಉದಾಹರಣೆಗೆ ಒಂದು ದೊಡ್ಡ ಮರದ ಸುತ್ತ ಹತ್ತು

ಕಡೆಯಲ್ಲಿ ನಿಂತು ನೋಡಿದರೆ ಹತ್ತು ರೀತಿ ಕಾಣುತ್ತದೆ. ಹತ್ತು ಚಿತ್ರಕಾರರು ಹತ್ತು ಕಡೆಯಲ್ಲಿ ಕುಳಿತು ಒಂದೊಂದು ಚಿತ್ರ ಬರೆದರೆ ಹತ್ತು ಬೇರೆ ಬೇರೆ ಚಿತ್ರಗಳಾಗುತ್ತವೆ. ಒಂದೇ ಕಡೆಯಲ್ಲಿ ಕುಳಿತು ಹತ್ತು ಮಂದಿ ಚಿತ್ರ ಬರೆದರೂ ಒಂದು ಚಿತ್ರ ಇನ್ನೊಂದು ಚಿತ್ರಕ್ಕಿಂತ ಭಿನ್ನವಾಗಿರುತ್ತದೆ. ಒಂದು ಮರವನ್ನು ಏಕ ಕಾಲದಲ್ಲಿಯೇ ಹತ್ತು ಕಡೆಯಿಂದ ನೋಡುವುದು ಕೂಡ ಅಸಾಧ್ಯ. ಬೇರೆ ಬೇರೆ ಹೊತ್ತಿನಲ್ಲಿ ನೋಡಬಹುದು. ಆದರೆ ಒಂದು ಹೊತ್ತು ನೋಡುವಾಗ ಕಾಣಿಸುವ ರೀತಿ ಬೇರೆ, ಇನ್ನೊಂದು ಹೊತ್ತು ನೋಡುವಾಗ ಕಾಣಿಸುವ ರೀತಿ ಬೇರೆ. ಕಾರಣ ಒಂದು ಹೊತ್ತಿನಿಂದ ಇನ್ನೊಂದು ಹೊತ್ತಿಗೆ ಮರದಲ್ಲೇನೊ ಬದಲಾವಣೆಯಾಗಿರಬಹುದು. ಒಂದು ಹೊತ್ತಿನಿಂದ ಇನ್ನೊಂದು ಹೊತ್ತಿಗೆ ನಮ್ಮ ಮನಸ್ಸಿನಲ್ಲಿ ಕೂಡ ಬದಲಾವಣೆ ಉಂಟಾಗಿರುವ ಸಂಭವವಿದೆ. ಮುಖ್ಯವಾಗಿ ಮನುಷ್ಯರನ್ನು ನೋಡುವಾಗ ಇದು ನಮಗೆ ಸ್ಪಷ್ಟವಾಗಿ ತಿಳಿಯುತ್ತದೆ. ಕಾಲದಿಂದ ಕಾಲಕ್ಕೆ ಒಂದೋ ಅವರಲ್ಲಿ ಬದಲಾವಣೆ ಉಂಟಾಗಿರುತ್ತದೆ. ಅಥವಾ ನಮ್ಮಲ್ಲಿ ಬದಲಾವಣೆ ಉಂಟಾಗಿರುತ್ತದೆ. ಅವರಲ್ಲಿಯೂ ನಮ್ಮಲ್ಲಿಯೂ ಬದಲಾವಣೆ ಉಂಟಾಗಿರುತ್ತದೆ. ಆದ್ದರಿಂದ ವೈಜ್ಞಾನಿಕವಾಗಿ ಹೇಳುವುದಾದರೆ, ಒಮ್ಮೆ ಕಂಡದ್ದನ್ನೇ ಮತ್ತೊಮ್ಮೆ ಕಾಣುವುದು ಸಾಧ್ಯವಿಲ್ಲ!

ನಾವು ಒಂದು ವಸ್ತುವನ್ನು, ಅದು ಮೂರ್ತವಾದುದಾಗಿರಲಿ ಅಮೂರ್ತವಾದುದಾಗಿರಲಿ, ಸಂಪೂರ್ಣವಾಗಿ ಕಾಣಲಾರೆವು. ಕಾಣುವ ಪ್ರಯತ್ನವನ್ನಷ್ಟೇ ಮಾಡಬಹುದು. ಇದು ಎಲ್ಲಾ ಸತ್ಯದ ದರ್ಶನದ ವಿಚಾರಕ್ಕೂ ಅನ್ವಯಿಸುತ್ತದೆ. ನಾವು ಮಾಡುವುದು ಸತ್ಯವನ್ನು ಕಾಣುವ ಪ್ರಯತ್ನವನ್ನು ಮಾತ್ರ. ಎಲ್ಲಾ ಸಾಹಿತ್ಯ, ಎಲ್ಲಾ ಚಿತ್ರ, ಎಲ್ಲಾ ಸೃಜನಶೀಲ ಕ್ರಿಯೆಯ ಹಿಂದೆ ಇರುವುದು ಈ ಪ್ರಯತ್ನ. ಸತ್ಯದ, ಅಂದರೆ ಕಂಡದ್ದರ, ಅತ್ಯಂತ ಆಳಕ್ಕೆ, ಚುಕ್ಕಿಯ ಕೇಂದ್ರದ ಕೇಂದ್ರಕ್ಕೆ, ಮತ್ತದರ ಕೇಂದ್ರದ ಕೇಂದ್ರಕ್ಕೆ ಹೋಗುವ ಪ್ರಯತ್ನ. ಅಂತ್ಯವಿಲ್ಲದುದರ ಅಂತ್ಯದ ಆಚೆಗೇನಿದೆ, ಅದರಾಚೆಗೇನಿದೆ, ಮತ್ತದರಾಚೆಗೇನಿದೆ ಎಂದು ವಿಚಾರಿಸುತ್ತಲೇ ಇರುವುದು. ಇದೇ ಚುಕ್ಕಿ ಚಿತ್ರದ ನಾದ. ಅನಂತ, ಅಗಮ್ಯ. ಆದರೆ ಅನಂತ, ಅಗಮ್ಯವೆಂದು ಸುಮ್ಮನಿರುವುದಲ್ಲ, ಅನಂತದೆಡೆಗೆ ಸಾಗುತ್ತಾ ಇರುವುದು. ಆ ಸಾಗುವಿಕೆಯಲ್ಲಿ ಆನಂದವನ್ನು ಕಾಣುವುದು. ನಮ್ಮ ಸಾಗುವಿಕೆಯಲ್ಲಿಯೇ ನಮ್ಮ ಇರುವಿಕೆಯಿದೆ. ನಮ್ಮ ಇರುವಿಕೆಯಲ್ಲಿಯೇ ನಮ್ಮ ಇರುವಿಕೆಯಿರುವುದು. ಈ ಇರುವಿಕೆ-ಸಾಗುವಿಕೆಯೇ ಬದುಕು ಮತ್ತು ಆನಂದ. ಅದೇ ಬದುಕು ಎಂಬ ನಾದ.

ಈ ವೇಗದ ಯುಗದಲ್ಲಿ ಕಾಲ, ದೂರ, ಗಾತ್ರಕ್ಕೆ ಸಂಬಂಧಿಸಿದ ಹಳೆಯ ಕಲ್ಪನೆಗಳ ನಾಶವಾಗಿದೆ. ಮುಂದೊಂದು ದಿನ ಬೆಳಿಗ್ಗೆ ಅಮೆರಿಕೆಗೆ ಹೋಗಿ ಮಾಡಬೇಕಾದ ಕೆಲಸ ಮುಗಿಸಿಕೊಂಡು ಸಾಯಂಕಾಲ ಮುಂಬಯಿಗೆ ಮರಳುವವರಿರಬಹುದು. ಕಾಲ ಮತ್ತು ದೂರ ಮಾತ್ರವಲ್ಲ, ಗಾತ್ರದ ಕಲ್ಪನೆಯೂ ಬದಲಾಗಿ ಭೂಮಿ ಒಂದು ಜಿಲ್ಲೆ ಎಂಬಂತೆ ಭಾಸವಾಗಬಹುದು. ಆದರೆ ಮನುಷ್ಯನಿಗೆ ಅಗಮ್ಯವಾದ ಅಗ್ರಾಹ್ಯವಾದ ಕಾಲ, ದೂರ, ವೇಗ, ಗಾತ್ರ ಇದ್ದೇ ಇರುತ್ತದೆ. ಅದನ್ನವನು ತನ್ನ ಸಮಾಧಾನಕ್ಕೆ ತನಗೆ ದಕ್ಕುವಷ್ಟು ದಕ್ಕುವ ರೀತಿಯಲ್ಲಿ ಪರಿಭಾವಿಸಿಕೊಳ್ಳುತ್ತಾನೆ. ಅದಲ್ಲದೆ ಬೇರೆ ದಾರಿಯಿಲ್ಲ. ಉದಾಹರಣೆಗೆ, ನಾವು ವಿಶ್ವವನ್ನು ಒಂದು ದೊಡ್ಡ ಕಾಲ್ಚೆಂಡು ಎಂದು ಕಲ್ಪಿಸಿಕೊಳ್ಳೋಣ. ಆ ಚೆಂಡಿಗೆ ಭಿತ್ತಿಯಿಲ್ಲವೆಂದೂ ಭಾವಿಸಿಕೊಳ್ಳೋಣ. ಭಿತ್ತಿಯಿಲ್ಲವೆಂದಾಗ, ಅದು ಅನಂತವೆಂದಾಯಿತಲ್ಲ? ಆದರೂ ನಮ್ಮ ವಿಶ್ವವನ್ನು ಅಂಥ ಒಂದು ಚೆಂಡು ಭಾವಿಸಿ, ಅಂಥ

ಅಸಂಖ್ಯ ಚೆಂಡುಗಳು, ತಾವೇ ತಮ್ಮ ಹಾದಿಗೆ ತಿರುಗುತ್ತಿವೆ ಎಂದು ಕಲ್ಪಿಸಿಕೊಳ್ಳಬಹುದು. ಅಥವಾ ಅಂಥ ಕೋಟ್ಯಾನುಕೋಟಿ ಚೆಂಡುಗಳು ಅಂಥದೇ ಆದರೆ ಅದಕ್ಕಿಂತ ದೊಡ್ಡ ಇನ್ನೊಂದು ಚೆಂಡಿಗೆ ಸುತ್ತು ಬರುತ್ತವೆ ಎಂದೂ, ಅಂಥ ದೊಡ್ಡ ಇನ್ನೊಂದು...ಹೀಗೆ ಅನಂತ ವಿಶ್ವವನ್ನು ಕಲ್ಪಿಸಿಕೊಳ್ಳುವ ಕುರಿತಾಗಿ ನಾವು ಆಡುವ ಮಾತು ಕೂಡ ಅನಂತವಾಗುತ್ತದೆ. ಗ್ರೀಕ್ ದಾರ್ಶನಿಕರು ಆಕಾಶಕಾಯಗಳ ಚಲನೆಯಲ್ಲಿ ಕಂಡ ಸ್ವರ್ಗೀಯ ಸಂಗೀತ ಇದೇ ಆಗಿರಬಹುದು. ಅನಂತ ಸಂಗೀತ! ನಮ್ಮೊಳಗೆ ಇರುವುದು ಕೂಡ ಈ ಸಂಗೀತವೇ ಅಲ್ಲವೆ? ಆದ್ದರಿಂದಲೇ ಅಲ್ಲವೆ ನಮಗೆ ನೆಲಕ್ಕೆ ಬಿದ್ದ ಕ್ಷಣದಿಂದಲೇ ಸಂಗೀತ ಪ್ರಿಯವಾಗುವುದು. ಸಂಗೀತದೊಂದಿಗೆ ಹುಟ್ಟುವ ಮನುಷ್ಯ ಸಂಗೀತದೊಂದಿಗೆ ಸುಖವಾಗಿ ಸಾಯುವುದು ಹೇಗೆ ಎಂದು ಒಂದು ದಿನ ಪತ್ತೆ ಮಾಡಿಯಾನು!

ಮನೋವೇಗ ಎಂಬೊಂದು ವೇಗವಿದೆ. ಇದು ನಿಜವಾದ ವೇಗವಲ್ಲ. ಇದು ಕಲ್ಪನಾ ವೇಗ. ಇದು ಬೆಳಕಿನ ವೇಗಕ್ಕಿಂತ ಸಾವಿರಾರು ಪಟ್ಟು ಹೆಚ್ಚಿನ ವೇಗ. ಆ ವೇಗದಿಂದ ಒಂದು ಕ್ಷಣಕ್ಕಿಂತಲೂ ಸಣ್ಣ ಕಾಲಾವಧಿಯಲ್ಲಿ ನಾನೀಗ ಕುಳಿತಿರುವಲ್ಲಿಂದ ಮಿಲಿಯಗಟ್ಟಲೆ ಮೈಲು ದೂರದ ಒಂದು ಸ್ಥಳದಲ್ಲಿ ಕುಳಿತುಕೊಳ್ಳಬಹುದು. ಅಂದರೆ ನನ್ನ ಮನಸ್ಸು ಇಲ್ಲಿ ಇರುವ ಇದೇ ಹೊತ್ತಿನಲ್ಲಿ ಅಲ್ಲಿಯೂ ಇರಬಹುದು. ಆದರೆ ಮನಸ್ಸು ಮನೋವೇಗದಲ್ಲಿ ಎಲ್ಲಿಗೆ ತಾನೇ ಹೋದೀತು? ಅದು ಒಮ್ಮೆ ಕಂಡ ಜಾಗಕ್ಕೆ ಮಾತ್ರ ಹೋಗಬಲ್ಲುದು. ಕಾಣದಲ್ಲಿಗೆ ಮನಸ್ಸು ಹೋಗಲಾರದಲ್ಲ? ಆದುದರಿಂದ ಮನೋವೇಗದಿಂದ ವಿಶ್ವದ ಕೊನೆಯನ್ನು ಹೇಗೆ ತಾನೇ ಕಾಣಲಾದೀತು? ಆದ್ದರಿಂದ ಮನೋವೇಗ ಮತ್ತು ವಿಶ್ವದ ಕೊನೆ ಎರಡೂ ಇರಲು ಸಾಧ್ಯ ಕಲ್ಪನೆಯಲ್ಲಿ ಮಾತ್ರ. ಆದರೆ ನಾವು ಮನೋವೇಗವನ್ನು ಪ್ರತಿದಿನ ಉಪಯೋಗಿಸುತ್ತೇವೆ. ನಮ್ಮ ಎಲ್ಲಾ ಚಿಂತನೆಗೂ ಅದು ಬೇಕು. ವಾಸ್ತವದಲ್ಲಿ, ಚಿಂತನಾ ಪ್ರಕ್ರಿಯೆ ಮತ್ತು ಮನೋವೇಗ ಒಂದೇ ಆಗಿದೆ. ಹಾಗೆಯೇ ವಿಶ್ವದ ಕೊನೆ ಕೂಡ ಇಲ್ಲೇ ಇದೆ. ಎಲ್ಲಿ ಅದರ ಆರಂಭವೋ ಅಲ್ಲೇ ಅದರ ಕೊನೆ, ಎಲ್ಲಿ ಅದರ ಕೊನೆಯೋ ಅಲ್ಲೇ ಅದರ ಆರಂಭ. ಅರ್ಥಾತ್ ಆರಂಭವೂ ಇಲ್ಲ, ಕೊನೆಯೂ ಇಲ್ಲ. ಯಾವುದಕ್ಕೂ ಇಲ್ಲ. □

ಕೆ.ಟಿ. ಗಟ್ಟಿ, ವನಶ್ರೀ, ಉಜಿರೆ-೫೭೪೨೪೦. ದೂ : -೦೮೨೫೬-೨೩೬೪೧೬.

# ಎರಡು ಪುಸ್ತಕಗಳು : ಆ ಮುಖ ಈ ಮುಖ

ಟಿ.ಎಸ್. ವಿವೇಕಾನಂದ

ಕೆಟ್ಟಮೇಲೆ ಬುದ್ದಿ ಬಂತು, ಎಂಬಂತೆ ನಮಗೆ ತುಂಬಾ ತಡವಾಗಿಯಾದರೂ ನಿಜವಾದ ಪರಿಸರ ಪ್ರಜ್ಞೆ ಎಂದರೇನೆಂದು ಅರ್ಥವಾಗತೊಡಗಿದೆ. ಮರಗಿಡಗಳ ಜಪದಿಂದ ಹೊರಬಂದು, ಮನುಷ್ಯನ ಅದರಲ್ಲೂ ಬಡವರ ಬದುಕಿನೊಂದಿಗೆ ಪರಿಸರಕ್ಕೆ ನೇರ ಸಂಬಂಧವಿದೆ ಎಂದು ಕೆಲವು ಪರಿಸರವಾದಿಗಳಾದರೂ ಗುರುತಿಸಿರುವುದು ಆಶಾದಾಯಕ ಸಂಗತಿ.

ಇವರಲ್ಲಿ ಮೊದಲಿಗರು ಪ್ರೊ. ಮಾಧವ ಗಾಡ್ಗಿಳ್ ಹಾಗೂ ರಾಮಚಂದ್ರ ಗುಹಾ. ಇವರಿಬ್ಬರ ಬಹುಪಾಲು ಕೃತಿಗಳಲ್ಲಿ ಪರಿಸರವಾದವನ್ನು ಸಾಮಾಜಿಕ ನ್ಯಾಯದ ತಕ್ಕಡಿಯಲ್ಲಿಟ್ಟು ತೂಗಿ ನೋಡುವ ಗಂಭೀರ ಪ್ರಯತ್ನವಿರುವುದನ್ನು ನಾವು ಕಾಣಬಹುದು. ಇವರ ಅಂಥ ಒಂದು ಕೃತಿ "ಪರಿಸರ ನ್ಯಾಯದ ತಕ್ಕಡಿಯಲ್ಲಿ". ಇವರಿಗಿಂತ ಹಿಂದಿನಿಂದಲೂ ಕಮ್ಯುನಿಸಂ ಹಾಗೂ ನಕ್ಸಲಿಸಂ ಬಗ್ಗೆ ತೀವ್ರ ಸಹಾನುಭೂತಿಯುಳ್ಳ, ಈ ಹಿನ್ನೆಲೆಯಲ್ಲಿಯೇ ಚಿಂತಿಸುವ, ಬರೆಯುತ್ತಿರುವ ಮಹಾಶ್ವೇತಾದೇವಿಯವರು ಮೂಲತಃ ಸಮತಾವಾದಿ. ಹಾಗಾಗಿ ಇವರ ಅನೇಕ ಬರಹಗಳು ಪರಿಸರವಾದಕ್ಕೆ ತೀರಾ ಹತ್ತಿರದಲ್ಲಿವೆ. ಇತ್ತೀಚೆಗೆ ಕನ್ನಡಕ್ಕೆ ಬಂದಿರುವ ಇವರ "ಯಾರದೀ ಕಾಡು" ಸಮೀಪದ ಉದಾಹರಣೆ.

ಈ ಎರಡು ಪುಸ್ತಕಗಳನ್ನು ನೀವು ಗಮನಿಸಿರಬಹುದು. ಆಕಸ್ಮಿಕ ನಿಮ್ಮ ಕಣ್ಣು ತಪ್ಪಿಸಿದ್ದರೆ ನೀವು ಗಮನಿಸಬೇಕಾದ ಎರಡು ಕೃತಿಗಳಿವು. ಕಾರಣಗಳಲ್ಲಿ ಮೊದಲನೆಯದು, ಒಂದು ಪುಸ್ತಕ ನೂರು ವರ್ಷಗಳ ಹಿಂದಿನ ಪರಿಸರವಾದದ ಚಾರಿತ್ರಿಕ ಘಟನೆಯ ಕಾದಂಬರಿ ರೂಪವಾದರೆ

ಇನ್ನೊಂದು ಈ ಶತಮಾನದ ಕೊನೆಯ ದಿನಗಳ ಪರಿಸರವಾದದ ನಿಜರೂಪವನ್ನು ಸಾಕ್ಷ್ಯಾಧಾರಗಳೊಂದಿಗೆ ಮಂಡಿಸುವ-ಅಕಾಡೆಮಿಕ್ ಅಧ್ಯಯನ.

ಎರಡನೆಯದು, ಈ ಎರಡೂ ಪುಸ್ತಕಗಳು ಭಾರತದಲ್ಲಿ ಪರಿಸರವಾದ ನಿಜವಾಗಿಯೂ ಸಾಗಬೇಕಾಗಿರುವ ದಿಕ್ಕನ್ನು ಸೂಚಿಸುವಂತಹವು. ಒಂದು ನೂರು ವರ್ಷಗಳ ಹಿಂದೆ ತಮಗೆ ಸಲ್ಲಬೇಕಾಗಿದ್ದ ನ್ಯಾಯಕ್ಕಾಗಿ ಹೋರಾಟ ಆರಂಭಿಸಿದ ಮುಂಡಾ ಮೂಲ ನಿವಾಸಿಗಳನ್ನು ಬ್ರಿಟಿಷ್ ಆಡಳಿತಶಾಹಿ ನಾಶ ಮಾಡಿದ ರೀತಿಯನ್ನು ವಿವರಿಸುತ್ತದೆ. ಇನ್ನೊಂದು ಕೃತಿ ಸ್ವಾತಂತ್ರ್ಯಾನಂತರದ ಭಾರತದಲ್ಲಿ ಸ್ವದೇಶಿ ಆಡಳಿತಗಾರರು ಇಡಿಯ ದೇಶವನ್ನು ಹೇಗೆ 'ಕೆಲವರ' ಉಳಿವಿಗಾಗಿ ಬಳಸಿ, 'ಬಹುಜನರನ್ನು' ನಾಶಮಾಡಿತು ಎಂಬುದನ್ನು ದಾಖಲೆಗಳ ಸಹಿತ ವಿವರಿಸುತ್ತದೆ.

ಮೂರನೆಯದಾಗಿ, ಈ ಎರಡು ಕೃತಿಗಳು ತುಂಬಾ ತಡವಾಗಿ ಕನ್ನಡಕ್ಕೆ ಬಂದವು ಎಂಬುದು. ತಡವಾಗಿ ಬಂದಿದ್ದರ ಬಗ್ಗೆ ಆಮೇಲೆ ಚರ್ಚಿಸಬಹುದು. 'ಹೀಗಿರುವುದು ಇಂಡಿಯಾ' ಎಂಬ ಮೊದಲ ಭಾಗದಲ್ಲಿ ಲೇಖಕರು ನೀಡುವ ವಿವರಗಳನ್ನು ಸುಮ್ಮನೆ ಓದುತ್ತಾ ಹೋದರೆ ಪರಿಸರದ ಗಂಧವೇ ಇಲ್ಲದವರಿಗೂ ಸಹ ಈವರೆಗೂ ನಮ್ಮ ಘೋಷಿತ ಪರಿಸರವಾದಿಗಳು ನೀಡಿರುವ ತಪ್ಪು ಕಲ್ಪನೆಯ ಸಂಗತಿ ಹೊಳೆಯುತ್ತದೆ.

ಇವೆರಡು ಕೃತಿಗಳ ನಡುವಿನ ವಿಚಿತ್ರ ಸಾಮ್ಯತೆಯನ್ನು ಗಮನಿಸಿ.....

"ಮುಂಡಾ ಜನರೆಲ್ಲರೂ ಬೇಯಿಸಿದ ಅನ್ನ ತಿನ್ನಬೇಕೆಂದು ಕನಸು ಕಾಣುತ್ತಿದ್ದಾರೆ. ಅವರ ಕನಸು ಕನಸಾಗಿಯೇ ಉಳಿದು ಹೋಗಿದೆ. ಬಗೆಬಗೆಯ ಧಾನ್ಯಗಳು ಬೇಕಾದಷ್ಟಿದ್ದರೂ ಒರಟು ಧಾನ್ಯಗಳೇ ಅವರ ಊಟ.....

ಮುಂಡಾಗಳು ಒರಟು ಕಾಳನ್ನೇ ಏಕೆ ತಿನ್ನಬೇಕು? ಎನ್ನುವ ಪ್ರಶ್ನೆ ಬಿರ್ಸಾನನ್ನು ತೀವ್ರವಾಗಿ ಕಾಡುತ್ತಿದೆ. ಆದಿವಾಸಿಗಳು ಇತರರಂತೆ ಏಕೆ ಅನ್ನ ತಿನ್ನಬಾರದು ?... ಅನ್ನ ಬೇಯಿಸಿದ ಕಾರಣದಿಂದಲೇ ಅವನನ್ನು ಹಿಡಿದುಕೊಟ್ಟರು!

ಇದು 'ಯಾರದೀ ಕಾಡಿ'ನ ಮಾತಾದರೆ.....

"ಇಂದು ಭಾರತ ಸರ್ವ ಭಕ್ಷಕರಿಗಾಗಿ, ಸರ್ವಭಕ್ಷಕರಿಂದ ಆದ ಸರ್ವಭಕ್ಷಕ ಪ್ರಜಾಪ್ರಭುತ್ವವಾಗಿದೆ. ಇಲ್ಲಿ ಯಾವ ಯೋಜನೆ ಜಾರಿಗೆ ಬಂದರೂ ಅದು ಸರ್ವಭಕ್ಷಕರಿಗಾಗಿಯೇ ಇರುತ್ತದೆ. ಅವರ ಮುಂದೆ ಪರಿಸರವೂ ನಿಲ್ಲಲಾರದು. ಪರಿಸರಸ್ನೇಹಿ ಜನರೂ ನಿಲ್ಲುವಂತಿಲ್ಲ. ಪರಿಸರದಿಂದ ತಮಗೆ ಬೇಕಾದ ಸಂಪನ್ಮೂಲಗಳನ್ನು ಇವರು ಕಿತ್ತುಕೊಳ್ಳುವ ವೆಚ್ಚ ಪರಿಸರ ಸ್ನೇಹಿ ಜನರ ಹೆಗಲಿಗೆ. ಏನನ್ನು ತೆರಬೇಕಾಗಿಯೂ ಇಲ್ಲ, ಯಾರಿಗೂ ಲೆಕ್ಕ ಕೊಡಬೇಕಾಗಿಯೂ ಇಲ್ಲ.

... ಇಂದು ಭಾರತದ ಅಭಿವೃದ್ಧಿ ಚಿತ್ರವೆಂದರೆ ಅತಿವೆಚ್ಚ, ಕಡಿಮೆ ಗುಣಮಟ್ಟ, ಪರಿಸರಕ್ಕೆ ಹಾನಿ ಮತ್ತು ಸಾಮಾಜಿಕ ಅಸಮಾನತೆಗಳೇ ಆಗಿಬಿಟ್ಟಿವೆ.

ಇದು ಗುಹಾ ಮತ್ತು ಗಾಡ್ಗೀಳ್‌ರ ಪರಿಸರ ನ್ಯಾಯದ ತಕ್ಕಡಿಯಲ್ಲಿನ ಮಾತುಗಳು.

ಮೇಲಿನ ಮೊದಲ ಮಾತುಗಳು ನಿರ್ದಿಷ್ಟವಾಗಿ ಬಡ, ಅನಕ್ಷರಸ್ಥ ಜನಾಂಗವೊಂದರ

ಬದುಕಿನ ಸ್ಥಿತಿಗತಿಗಳನ್ನು ಹೇಳಿದರೆ, ಎರಡನೆಯ ಕೃತಿಯಲ್ಲಿನ ಮಾತುಗಳು ಅದೇ ಸ್ಥಿತಿಗತಿಗಳನ್ನು ಸಾರ್ವತ್ರಿಕಗೊಳಿಸಿ ಇಡಿಯ ದೇಶಕ್ಕೆ ಅನ್ವಯಿಸಿದಂತಿವೆ.

ಇವುಗಳ ನಡುವಿನ ವ್ಯತ್ಯಾಸವೆಂದರೆ ಮೊದಲ ಸ್ಥಿತಿಗತಿಯ ಚಿತ್ರ ಇಂಗ್ಲೀಷರ ಕಾಲದ್ದಾದರೆ ಎರಡನೆಯ ಸಾರ್ವತ್ರೀಕರಣ ಸ್ವತಂತ್ರ ಭಾರತದ್ದು.

ಇಲ್ಲಿ ನಾವು ಗಮನಿಸಬೇಕಾದ ಮುಖ್ಯಾಂಶವೆಂದರೆ ಕಾಲ, ಆಡಳಿತಗಳು ಬದಲಾಗಿವೆಯೇ ಹೊರತು ದೇಶದ ಬಡಜನರ ಚಿತ್ರ ಮಾತ್ರ ಬದಲಾಗಿಲ್ಲ ಎನ್ನುವುದನ್ನು.

ಶತಮಾನದ ಹಿಂದಿನ ಜನರಲ್ಲಿ ...,

"ಅವನು (ಬಿರ್ಸಾಮುಂಡಾ) ಬರುತ್ತಲೇ ಮುಂಡಾ ಜನರಿಗೆ ಮೈತುಂಬಾ ಬಟ್ಟೆ, ಮಡಕೆ ತುಂಬಾ ಕಾಳು, ಡಬ್ಬದ ತುಂಬಾ ಉಪ್ಪಿರುತ್ತದೆ. ದೀಪಗಳಿಗೆ ಎಣ್ಣೆ ಇರುತ್ತದೆ. ಆಗ ಮುಂಡಾಗಳೇ ಕಾಡಿಗೆ ರಾಜರಾಗಿ ಹೋಗುತ್ತಾರೆ..." ಎಂಬಂಥ ಕನಸುಗಳಿವೆ. ಈ ಕನಸುಗಳ ಸಾಕಾರಕ್ಕಾಗಿ ಅವರು ಮಾಡಬಹುದಾದ್ದನ್ನೆಲ್ಲಾ ಮಾಡುತ್ತಾರೆ. ಕೊನೆಗೆ ಧರ್ಮವನ್ನೂ ಬಿಡುತ್ತಾರೆ. ಆದರೆ, "ಚರ್ಚಿಗೆ ಸೇರಿದ ಮುಂಡಾ ಕ್ರೈಸ್ತರೆಲ್ಲರೂ ಮುಲ್ಕೀ ಹೋರಾಟದಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಮಿಷನ್ ದೊರೆಗಳೂ, ಸರ್ಕಾರವ ದೊರೆಗಳೂ ಎಲ್ಲರೂ ಒಂದೇ. ಈ ದೊರೆಗಳಿಂದ ಮುಂಡಾ ಜನರಿಗೆ ಒಳ್ಳೆಯದಾಗೋಲ್ಲ" ಅಂದುಕೊಳ್ಳುತ್ತಿದ್ದಾರೆ.

ಇದಕ್ಕೆ ಮುಂಚೆ "ತಲೆ ತುಂಬಾ ಹೂ ಮುಡಿದುಕೊಂಡು ಹೆಂಗಸರು ಗಂಡಸರು ಆನಂದದಿಂದ ಕುಣಿಯುತ್ತಿದ್ದರು. ಬಿರ್ಸಾ ಅದನ್ನು ಕೂಡಾ ನಿಲ್ಲಿಸಿದ. ಕುಲದೇವತೆಗಳ ಪೂಜೆ, ಬಲಿ, ಹಾಡುವುದು, ಕುಣಿಯುವುದನ್ನೂ ಬಿಡಿಸಿದ. ಹಬ್ಬದ ಪೂಜೆ ಆಯುಧ ಪೂಜೆಗಳನ್ನೂ ಬಿಡಿಸಿದ."

"ಬಿರ್ಸಾ ತಾಯಿಗೆ ಹೇಳುತ್ತಿದ್ದ. ಮುಂಡಾ ಜನರ ಜೀವನವೆಲ್ಲಾ ನೋವಿನಿಂದಲೇ ಕೂಡಿದೆ. ಇಷ್ಟು ಮಂದಿ ದೇವತೆಗಳನ್ನು ಪೂಜಿಸುತ್ತಾ, ಆಡುತ್ತಾ, ಹಾಡುತ್ತಾ, ಬರುತ್ತಿದ್ದುದರಿಂದ ನಮ್ಮ ದುಃಖವೇನಾದರೂ ಕಡಿಮೆಯಾಗಿದೆಯಾ?" ಎಂದು ಪ್ರಶ್ನಿಸುತ್ತಾನೆ. ಯಾರಿಂದಲೂ ಉತ್ತರವಿಲ್ಲ.

ಇವರಿಗೆ ಹೋರಾಟಕ್ಕಿಳಿಯುವುದು ಅನಿವಾರ್ಯವಾಗುತ್ತದೆ.

ಆದರೆ ಈ ಎಲ್ಲವನ್ನೂ ಕ್ರೋಢೀಕರಿಸಿದಂತೆ ಒಂದು ಶತಮಾನದ ನಂತರ ಗಾಡ್ಗಿಳ್ ಮತ್ತು ಗುಹಾ ಅದಕ್ಕೆ ಪೂರಕವಾಗಿ ಹೇಳುತ್ತಾರೆ.... " ಆದರೆ ಭಾರತದ ಹೆಚ್ಚಿನ ಪರಿಸರ ಹೋರಾಟಗಳು ಸಮಾಜದಲ್ಲಿ ಸಂಪತ್ತಿನ ಅಸಮಾನ ಹಂಚಿಕೆಯನ್ನು ಪ್ರಶ್ನಿಸುವ ಹೋರಾಟಗಳೇ ಆಗಿವೆ. ಇಂದಿನ ಆರ್ಥಿಕ ಅಭಿವೃದ್ಧಿಯ ಅಸಮಾನ ಹಂಚಿಕೆಯಿಂದ ಶ್ರೀಮಂತರು ಮತ್ತೂ ಶ್ರೀಮಂತರಾಗಿ, ಪರಿಸರ ಸ್ನೇಹಿ ಬಡ ಜನರಿಗೆ ಮತ್ತಷ್ಟು ಬಡತನ ಮತ್ತು ಸುತ್ತಮುತ್ತಲಿನ ಪರಿಸರ ನಾಶವನ್ನೇ ಕೊಡುತ್ತಿರುವುದರಿಂದ ಉದ್ಭವಿಸಿರುವ ಜಗಳಗಳಲ್ಲಿ ಈ ಹೋರಾಟಗಳು ಹುಟ್ಟಿವೆ."

ಹೀಗೆ ಈ ಎರಡೂ ಕೃತಿಗಳ ಏಕಕಾಲದ ಪ್ರಕಟಣೆಯಿಂದಾಗಿ ಏಕಕಾಲದಲ್ಲಿ ಇವನ್ನು ಓದುವ ಅವಕಾಶ ಸಿಕ್ಕಿದೆ. ಹೀಗೆ ಒಂದೇ ಬಾರಿ ಇವುಗಳನ್ನು ಓದುವ ಮೂಲಕ ನಮಗೆ ಪರಕೀಯರ ಆಡಳಿತದಲ್ಲಿ ಶತಮಾನದ ಹಿಂದಿನ ಭಾರತದ ಚಿತ್ರ ಹಾಗೂ ಸ್ವದೇಶೀ ಆಡಳಿತದ ಸಮಕಾಲೀನ

ಚಿತ್ರಗಳು ಒಟ್ಟೊಟ್ಟಿಗೇ ಸಿಗುತ್ತವೆ. ಹೋಲಿಕೆ, ಅಧ್ಯಯನ ಹಾಗೂ ನಮ್ಮ ಪರಿಸರದ ಪರಿಸ್ಥಿತಿಗಳನ್ನು ಅರ್ಥಮಾಡಿಕೊಳ್ಳಲು ಸಹಾಯ ಮಾಡುತ್ತವೆ. ಚಿತ್ರಗಳಲ್ಲಿ ಯಾವುದೇ ವ್ಯತ್ಯಾಸಗಳಿಲ್ಲದಿರುವುದನ್ನು ಋಜುವಾತು ಪಡಿಸುತ್ತವೆ. ಮುಂದಿನ ಕಾರ್ಯ ಯೋಜನೆಗೆ ನೆರವಾಗುತ್ತವೆ. ನಮ್ಮ ಅಭಿವೃದ್ಧಿಯ ದಿಕ್ಕನ್ನು ಸರಿಪಡಿಸಲು ಸೂಚಿಸುತ್ತವೆ. ನಿಜವಾದ ಪರಿಸರವಾದವನ್ನು ಕಲಿಸುತ್ತಲೇ ಕನಸುಗಳತ್ತ ಕೊಂಡೊಯ್ಯುತ್ತವೆ.

ಇಲ್ಲಿ ಕವಿ ಎಲಿಯಟ್ ಹೇಳಿದ್ದನ್ನು ಒಂದಿಷ್ಟು ಹಾಸ್ಯದೊಂದಿಗೆ ನೆನೆಯಬಹುದು.

ಆವಿಷ್ಕಾರವನೆಂದಿಗೂ ನಿಲ್ಲಿಸದೆ
ಮುಕ್ತಾಯದ ಬಳಿಕ
ಎಲ್ಲಿಂದ ಆರಂಭಿಸಿದೆವೋ
ಅಲ್ಲಿಗೇ ಬಂದು
ಇದೆ ಮೊದಲು ಕಂಡಂತೆ
ಈ ಸ್ಥಳವನು.

(ಈ ಎರಡೂ ಕೃತಿಗಳ ವಿಮರ್ಶೆ ಇಲ್ಲಿನ ಉದ್ದೇಶವಲ್ಲ. ಕೇವಲ ಇವುಗಳ ಪರಿಚಯ ಹಾಗೂ ಓದಲು ನೆನಪು ಮಾಡುವುದಷ್ಟೇ ಇಲ್ಲಿನ ಆಶಯ. 'ಪರಿಸರ ನ್ಯಾಯದ ತಕ್ಕಡಿಯಲ್ಲಿ' ಕೃತಿಯ ಅನುವಾದ ಶಾರದಾ ಗೋಪಾಲ್ ಅವರದು. ಹಾಗೇ 'ಯಾರದೀ ಕಾಡಿ'ನ ಅನುವಾದ ಬಿ. ಸುಜ್ಞಾನ ಮೂರ್ತಿ ಅವರದು.)

□

ಟಿ.ಎಸ್. ವಿವೇಕಾನಂದ, ನಂ.೨೮೧, ಎರಡನೇ 'ಎ' ಮುಖ್ಯರಸ್ತೆ
೧ನೇ ಹಂತ, ವಿಬಿಹೆಚ್‌ಸಿ, ಗಿರಿನಗರ, ಬೆಂಗಳೂರು -೮೫.

# ಗದುಗಿನ ಭಾರತ : ಕೆಲ ಟಿಪ್ಪಣಿಗಳು

ರಾಮಲಿಂಗಪ್ಪ ಟಿ. ಬೇಗೂರು

ನಮ್ಮ ವಿಮರ್ಶಾವಲಯದಲ್ಲಿ ಕೃತಿಯ ಆಯ್ದ ಬಿಡಿ ನೆಲೆಗಳನ್ನು ಆಧರಿಸಿ ವೈಚಾರಿಕ ಆಕೃತಿಯೊಂದನ್ನು ಕಟ್ಟುವ ಪರಿಪಾಠವೊಂದಿದೆ. ಸಾಹಿತ್ಯ ವಿಮರ್ಶೆಯೆಂದರೆ ಕೃತಿಯ ಆಶಯಗಳನ್ನು ವೈಚಾರಿಕ ಆಕೃತಿಗಳನ್ನಾಗಿ ತಾತ್ವೀಕರಿಸುವುದು ಎಂಬ ತಿಳುವಳಿಕೆಯು ಇದರ ಹಿನ್ನೆಲೆಯಲ್ಲಿ ಕೆಲಸ ಮಾಡಿದೆ. ಇತ್ತೀಚೆಗೆ ವಿಮರ್ಶೆಯು ಸಾಂಸ್ಕೃತಿಕ ಸಂಕಥನವಾಗಿ ಹೊರಳಿಕೊಳ್ಳುತ್ತಿದೆಯಾದರೂ ಈ ಆಶಯ-ಆಕೃತಿ ತಿಳುವಳಿಕೆಯಿಂದ ಇನ್ನೂ ನಮ್ಮ ವಿಮರ್ಶೆ ಕವುಚಿಕೊಂಡಂತೆಯೇ ಇದೆ.

ಯಾವುದೇ ಮಹಾಕಾವ್ಯ ಬದುಕಿನಷ್ಟೇ ಸಂಕೀರ್ಣವಾದದ್ದು. ಅದು ಯಾವುದೇ ಒಂದು ತಾತ್ವಿಕ ಆಕೃತಿಗೆ ದಕ್ಕುವಂಥದ್ದಲ್ಲ. ಭಿನ್ನ ಘಟನಾವಳಿಗಳು, ಭಿನ್ನ ಆಶಯಗಳಿಂದ ಬಹುಮುಖಿಯಾದ ಕೆಲವೊಮ್ಮೆ ವೈರುಧ್ಯಮಯವೂ ಆದ ತಾತ್ವಿಕ ಬಹು ಆಕೃತಿಗಳು ಯಾವುದೇ ಮಹಾಕಾವ್ಯದಲ್ಲಿ ಇರುತ್ತದೆ. ಕುಮಾರವ್ಯಾಸನ ಗದುಗಿನ ಭಾರತವೂ ಇದಕ್ಕೆ ಹೊರತಲ್ಲ. ಮಹಾಕಥನಗಳು ಒಮ್ಮೆ ಕಥನಗೊಂಡು ಮುಗಿದುಬಿಡುವ ಆಕೃತಿಗಳಲ್ಲ. ನಮ್ಮ ರಾಮಾಯಣ ಮಹಾಭಾರತಗಳಂತೂ ಕಾಲ ಕಾಲಕ್ಕೆ ಆಯಾ ಸಮಾಜದ ಆಶೋತ್ತರಗಳ ಕಲಾಕೃತಿಗಳಾಗಿ ಮರುಕಥನೀಕರಣಗೊಂಡಿವೆ. ಹೀಗೆ ಮರುಕಥನೀಕರಣಕ್ಕೆ ಒಳಗಾಗುವಾಗ ಆಯಾ ಕಾಲ ದೇಶದ ಸ್ಥಳೀಕತೆ ಮಹಾಕಥನದೊಳಕ್ಕೆ ಪ್ರವೇಶ ಪಡೆಯುತ್ತಿರುತ್ತದೆ. ಕುಮಾರವ್ಯಾಸ ಭಾರತ ಕೂಡ ಇಂಥ ಒಂದು ಮರುಕಥನೀಕರಣವಾಗಿದೆ. ಸ್ಥಳೀಯ ಕನ್ನಡ ಸಂಸ್ಕೃತಿಯ ಆಶೋತ್ತರಗಳು ಒಳತುಂಬಿಕೊಂಡ ಮರುಕಥನೀಕರಣವಾಗಿದೆ.

ಕುಮಾರವ್ಯಾಸನಲ್ಲಿ ಬಳಕೆಯಾಗಿರುವ ಭಾಮಿನಿ ಛಂದಸ್ಸು, ರೂಪಕಾತ್ಮಕ ಭಾಷೆ, ಭಾಗವತ ಭಕ್ತಿ ಅಥವಾ ಕೃಷ್ಣ ಮಹಿಮೆ, ಶೈವ-ವೈಷ್ಣವ ತಾಕಲಾಟ, ರಾಜ ಪ್ರಭುತ್ವದ ಎದುರಿಗೆ ದೈವಪ್ರಭುತ್ವವನ್ನು ಎತ್ತಿ ನಿಲ್ಲಿಸುವ ಕಥನ ಕ್ರಮ ಹೀಗೆ ಹಲವಾರು ನೆಲೆಗಳಲ್ಲಿ ಕನ್ನಡ ಸಂಸ್ಕೃತಿಯ ಆಶೋತ್ತರಗಳು ಒಳತುಂಬಿಕೊಂಡಿರುವುದನ್ನು ಕಾಣಬಹುದಾಗಿದೆ.

ಧರ್ಮ-ದೈವ ಮತ್ತು ಅಧ್ಯಾತ್ಮಗಳನ್ನು ಕುರಿತು ಚಿಂತಿಸುವುದು, ಇವುಗಳ ಮೂಲಕ ಲೌಕಿಕ ಮಾನವ ನಡಾವಳಿಯನ್ನು ಶೋಧಿಸುವುದು ನಮ್ಮ ಬಹುಪಾಲು ಸಾಹಿತ್ಯ ಚರಿತ್ರೆಯ ಪ್ರಧಾನ ಕಾಳಜಿಯಾಗಿದೆ. ಕವಿಗಳಿಗೆ ಇದರ ಆತ್ಯಂತಿಕ ಉದ್ದೇಶ ಬದುಕಿನ ಬಗ್ಗೆ ತಮ್ಮದೇ ಕಲ್ಪನೆಯನ್ನು ಕಟ್ಟಿಕೊಡುವುದೇ ಆಗಿದೆ. ಗದುಗಿನ ಭಾರತದಲ್ಲಿಯೂ ಇದೇ ಕಾಳಜಿ ಕೆಲಸ ಮಾಡಿದೆ. ಇಲ್ಲಿನ ಕೃಷ್ಣ ಪಾತ್ರ ದೈವತ್ವ ಮತ್ತು ಮನುಷ್ಯತ್ವಗಳೆರಡೂ ಹದಬೆರೆತ ಪಾತ್ರ. ಕೃಷ್ಣನೆಂದರೆ ಇಲ್ಲಿ ಮಾನವ ರೂಪದಲ್ಲಿರುವ ದೈವ. ಇವನು ಮಾನವ ಬದುಕಿನಲ್ಲಿರಬೇಕಾದ ಅತ್ಯುನ್ನತ ಆದರ್ಶದ ಸಂಕೇತ.

ಪಂಪ, ರನ್ನರ ಪುರಾಣಗಳಲ್ಲಿ ಮನುಷ್ಯ ಹಲವು ಜನ್ಮಗಳನ್ನು ಎತ್ತಿ ಭವಾವಳಿಗಳನ್ನು ದಾಟಿ ಆಗುವ ಕಥನ ಇದ್ದರೆ, ಹರಿಹರನ ರಗಳೆಗಳಲ್ಲಿ ಮನುಷ್ಯ ಒಂದೇ ಜನ್ಮದಲ್ಲಿ ತನ್ನೆಲ್ಲ ಲೌಕಿಕ ಮಾನವ ದೌರ್ಬಲ್ಯಗಳನ್ನು ಕಳೆದುಕೊಂಡು ಗಣಪದವಿ ಪಡೆಯಲು ಅರ್ಹನಾಗುವ ಹಂತಕ್ಕೆ ಬೆಳೆಯುವ ಕಥನಗಳಿವೆ. ಇಲ್ಲೆಲ್ಲಾ ಮಾನವನು ದೈವವಾಗುವ ಪ್ರಕ್ರಿಯೆಯೇ ಮುಖ್ಯವಾದದ್ದು. ದೈವತ್ವ ಪಡೆಯುವುದೆಂದರೆ ಮನುಷ್ಯ ದೌರ್ಬಲ್ಯಗಳನ್ನೆಲ್ಲ ಕಳೆದುಕೊಂಡು ಅತ್ಯುನ್ನತ ವ್ಯಕ್ತಿತ್ವವನ್ನು ಪಡೆಯುವ ಕ್ರಿಯೆ. ಇಂಥಾ ಕ್ರಿಯೆಗೆ ಈ ಬದುಕು ಒಂದು ರಂಗಶಾಲೆ. ಗದುಗಿನ ಭಾರತದಲ್ಲಿಯೂ ಶ್ರೀಕೃಷ್ಣನೇ ಬಹುದೊಡ್ಡ ಆದರ್ಶವ್ಯಕ್ತಿ. ಮಾನವರೊಳಗೇ ಇರುವ ದೈವೀ ವ್ಯಕ್ತಿತ್ವದ ಸಂಕೇತ ಇವನು. ಆದರೆ ಕುಮಾರವ್ಯಾಸ ತಿಳಿದಿರುವಂತೆ ಭಾರತ ಕಥನ ಇಷ್ಟು ಸರಳವಾಗಿ ಕೃಷ್ಣಕತೆಯಲ್ಲ. ಅದು ಬದುಕಿನ ಅಗಾಧತೆಯ ಕಣರೂಪ. ಕುಮಾರವ್ಯಾಸ ಭಾರತ ಕತೆಯನ್ನು ಕೃಷ್ಣಕತೆಯನ್ನಾಗಿ ಮಾಡಲು ಹೊರಟಿದ್ದಾನಾದರೂ ಅದು ಬರೀ 'ಪದುಮನಾಭನ ಮಹಿಮೆ ಮಾತ್ರ' ಉಳ್ಳ ಕಥನವಾಗಿ ಉಳಿದಿಲ್ಲ. ಬದುಕಿನ ಕಥನವಾಗಿ ಪರಿಣಮಿಸಿದೆ.

## ನೆರಳಿಗೂ ಬೇರೆ ವಿವೇಕವುಂಟೇ?

ಕುಮಾರವ್ಯಾಸನ ಭಾರತ ಬರೀ ವ್ಯಾಸನ ನೆರಳಲ್ಲ. ಅದು ಕನ್ನಡ ಸಂಸ್ಕೃತಿಯ ನೆರಳು. ಇಲ್ಲಿ ಚಿತ್ರಿತಗೊಂಡಿರುವ ಬದುಕು ಕುರುಪಾಂಡವ ಪಾತ್ರಗಳ ಬದುಕು ಮಾತ್ರವಲ್ಲ. ಕನ್ನಡ ಜನರ ಬದುಕು ಕೂಡ. ಹಾಗಾದರೆ ಇದು ಕನ್ನಡ ಬದುಕಿನ ನೆರಳು ಮಾತ್ರವೇನಾ? ಖಂಡಿತಾ ಅಲ್ಲ. ಯಾವುದೇ ಕೃತಿ ಬರೀ ಸಂಸ್ಕೃತಿಯ ನೆರಳಾಗಿ ಮಾತ್ರ ಇರುವುದಿಲ್ಲ. ಸಂಸ್ಕೃತಿಯ ಅಂಗಾಂಗಗಳನ್ನು ತಿಕ್ಕಿ ತೊಳೆಯುವ - ದಿಕ್ಕು ತೋರುವ ಕೃತಿಯಾಗಿಯೂ ಇರುತ್ತದೆ. ಅಂಥಾ ಕೃತಿ ಮಾತ್ರ ಕಾಲಾನಂತರದಲ್ಲಿ ಉಳಿದು ಬಾಳುತ್ತದೆ. ಇಲ್ಲದೇ ಹೋದರೆ ಯಾವ ಕೃತಿಗೂ ಉಳುಬಾಳು ಇರುವುದಿಲ್ಲ. ಕನ್ನಡ ಶಿಷ್ಟ-ಮೌಖಿಕ ಪರಂಪರೆಗಳೆರಡರಲ್ಲೂ ಬಹು ಆದರದಿಂದ ಉಳುಬಾಳಿಕೊಂಡು ಬಂದಿರುವ ಕೃತಿ ಗದುಗಿನ ಭಾರತ. ಇಲ್ಲದಿದ್ದರೆ ಇವಕ್ಕೆ ಗಮಕ, ಪಾರಾಯಣ, ಯಕ್ಷಗಾನ, ಬಯಲಾಟ, ತಾಳ ಮದ್ದಳೆ, ವಿದ್ವದ್ಗೋಷ್ಠಿ, ಕೇಳಿಕೆ, ಹರಿಕಥಾಶ್ರವಣ ಹೀಗೆ ಹತ್ತು ಹಲವು ಸಾಮಾಜಿಕ ರಕ್ತನಾಳಗಳಲ್ಲಿ ಹೇಗೆ ತಾನೇ ಸದಾ ಹೊಕ್ಕು ಬಳಕೆ ಪಡೆಯಲು ಸಾಧ್ಯವಾಗುತ್ತಿತ್ತು?

ಈ ಹಿನ್ನೆಲೆಯಿಂದ ಕುಮಾರವ್ಯಾಸನ ಭಾರತ ಕಥಾ ಹಂದರದ ಒಳ ಹೂರಣವೆಲ್ಲ ಕನ್ನಡ ಜನಪದರ ತವಕ ತಲ್ಲಣಗಳ ಸಂಕೇತೀಕರಣಗಳೇ ಎಂಬುದರಲ್ಲಿ ಎರಡು ಮಾತಿಲ್ಲ.

ಕರ್ಣನಿಂದ ಗಾಯಗೊಂಡು ಮೂರ್ಛೆಗೆ ಸಂದು ಶಿಬಿರಕ್ಕೆ ತರಲ್ಪಟ್ಟ ಧರ್ಮರಾಯನನ್ನು ನೋಡಲು ಕೃಷ್ಣಾರ್ಜುನರು ಬಂದಾಗ ಧರ್ಮರಾಯನಿಗೆ ತಮ್ಮನ ಮೇಲೆ ಸಿಟ್ಟು ಬಂದುಬಿಡುತ್ತದೆ. ಈ ಅಣ್ಣನನ್ನು ರಕ್ಷಿಸಲಾಗದ ನಿನ್ನಂಥವನಿಗೆ ಗಾಂಡೀವ ಬೇರೆ ಕೇಡು. ನೀನೂ ಒಬ್ಬ ಬಿಲ್ಲುಗಾರನೇ? ನಿನ್ನ ಗಾಂಡೀವವನ್ನು ಬೆಂಕಿಗೆ ಹಾಕು ಎಂದು ಅರ್ಜುನನನ್ನು ಧರ್ಮಜ ಬೈಯುತ್ತಾನೆ. ನನ್ನ ಗಾಂಡೀವವನ್ನೇ ಬೆಂಕಿಗೆ ಹಾಕೆಂದನಲ್ಲ ಎಂದು ಸಿಟ್ಟಾದ ಅರ್ಜುನ ಕತ್ತಿ ಹಿರಿದು ಧರ್ಮಜನನ್ನೇ ಕೊಂದು ಬಿಡುತ್ತೇನೆಂದು ಹೊರಡುತ್ತಾನೆ. 'ಬಾ ಕರ್ಣನು ಈಗಾಗಲೇ ಇರಿದಿರುವ ಈ ಹೆಣವನ್ನು ನೀನೂ ಇರಿದು ಬಿಡು ಬಾ' ಎಂದು ಧರ್ಮಜ ದುಃಖಿತನಾಗುತ್ತಾನೆ. ಇದನ್ನೆಲ್ಲ ನೋಡುತ್ತಿದ್ದ ಕೃಷ್ಣ ಇಬ್ಬರಿಗೂ ಸಮಾಧಾನ ಮಾಡುತ್ತಾನೆ. ಅರ್ಜುನನ ವರ್ತನೆಯಿಂದ ಧರ್ಮರಾಯನಿಗೆ ದಿಗ್ಭ್ರಮೆಯಾಗುತ್ತದೆ. ಇಲ್ಲಿ ಇವರ ಜಗಳ ನಮ್ಮ ಹಳ್ಳಿಗಳ ಸಾಮಾನ್ಯ ಅಣ್ಣ ತಮ್ಮಂದಿರ ಜಗಳದ ಹಾಗೇ ಕಾಣುತ್ತದೆ. ಕೊನೆಗೂ ಕೃಷ್ಣ ಎಲ್ಲರಿಗೂ ತಿಳುವಳಿಕೆ ಹೇಳುತ್ತಾನೆ. ಇಲ್ಲಿ ಕೃಷ್ಣ ಧರ್ಮಜನಿಗೆ 'ನೆಳಲಿಂಗೆ ಬೇರೆ ವಿವೇಕ ಚೇಷ್ಟೆಗಳೇ?' (ಕರ್ಣಪರ್ವ ೧೭-೫೩) ದ್ರೌಪದಿಯೂ ಸೇರಿದಂತೆ ಎಲ್ಲ ನಿನ್ನ ತಮ್ಮಂದಿರೂ ನಿನ್ನ ನೆರಳುಗಳೇ ಅಲ್ಲವೇ? ನಿನ್ನ ಯಶೋಭಿಲಾಷೆ ನಿನ್ನ ಆಜ್ಞಾಧಾರಣೆ ಬಿಟ್ಟರೆ ಅವರಿಗ ಬೇರೆ ವಿವೇಕ ಚೇಷ್ಟೆಗಳುಂಟೇ? ಧರ್ಮರಾಯಾ ಏಳು ಅರ್ಜುನನನ್ನು ಆಲಿಂಗಿಸಿಕೋ. ಒಳಜಗಳ ತರವಲ್ಲ ಎಂದು ಹೇಳುತ್ತಾನೆ.

ಇಲ್ಲಿ ಕುಮಾರವ್ಯಾಸ ವಿವೇಕ ಮತ್ತು ಚೇಷ್ಟೆ ಎಂಬ ಪದಗಳನ್ನು ಒಟ್ಟಿಗೇ ಇಟ್ಟಿದ್ದಾನೆ. ಇಂಥ ನವೀನ ಪದಕೂಟಗಳನ್ನು ಕಟ್ಟುವುದರಲ್ಲಿ ಈತ ಬಹಳ ಪರಿಣತ. ನೆರಳಿಗೂ ಬೇರೆ ವಿವೇಕ ಚೇಷ್ಟೆಗಳು ಇರುತ್ತವೆಯೇ? ಎಂಬ ಈ ಪ್ರಶ್ನೆಯನ್ನು ಅಪಸಾಂದರ್ಭೀಕರಿಸಿ ನೋಡಿದರೆ ಇದರ ಧ್ವನಿಗಳು ಕುಮಾರವ್ಯಾಸನ ಕಾವ್ಯ ಸ್ವರೂಪವನ್ನೇ ನಿರ್ವಚಿಸುತ್ತವೆ ಎನಿಸುತ್ತದೆ. ಕುಮಾರ ವ್ಯಾಸನ ಕಾವ್ಯವು ಈತ ಪ್ರತಿನಿಧಿಸುವ ಕನ್ನಡ ಸಂಸ್ಕೃತಿಯ ನೆರಳಾಗಿಯೂ ಇದಕ್ಕೆ ಇದರದ್ದೇ ಆದ ಬೇರೆ ವಿವೇಕ ಚೇಷ್ಟೆಗಳು ಇವೆಯೇ? ಎಂದರೆ ಇವೆ ಎಂದೇ ಹೇಳಬೇಕು. ಧರ್ಮಜನ ನೆರಳಾಗಿಯೂ ಅವನ ಸೋದರರಿಗೆ ಹೇಗೆ ಅವರದೇ ಬೇರೆ ವಿವೇಕ ಚೇಷ್ಟೆಗಳು ಇವೆಯೋ ಹಾಗೆ ಕುಮಾರವ್ಯಾಸನ ಕಾವ್ಯಕ್ಕೂ ಕನ್ನಡ ಸಂಸ್ಕೃತಿಯ ನೆರಳಾಗಿ ಅದರದ್ದೇ ಆದ ಬೇರೆ ವಿವೇಕ ಚೇಷ್ಟೆಗಳಿವೆ.

[ಜೊತೆಗೆ ನೋಡಿ 'ಕೃಷ್ಣ ಚೇಷ್ಟೆಯೆ ಹಾನಿವೃದ್ಧಿ ವಿನಾಶವಭ್ಯುದಯ ಪ್ರಪಂಚದಲಿ (ಸಭಾ ೧೦-೭೪) ಮತ್ತು 'ದೇಹಚ್ಛಾಯೆಗುಂಟೇ ಬೇರೆ ಚೇಷ್ಟೆ?' (ಸಭಾ ೧೨-೯೪)]

### ಧರ್ಮ-ಕೀರ್ತಿ-ಮುಕ್ತಿ

ಎಲ್ಲ ಮಹಾನ್ ಸಾಹಿತ್ಯ ಕೃತಿಗಳೂ ಬಹುಸ್ತರೀಯ-ಸಂಸ್ಕೃತಿಯ ಭಾಷಿಕ ಆಕೃತಿಗಳಾಗಿದ್ದರೂ ಅಲ್ಲಿ ಸಂಸ್ಕೃತಿಯ ವಿವರಗಳು ಬರೀ ನಡೆದ ಘಟನೆಗಳ ತದ್ವತ್ ನಿರೂಪಣೆಗಳಾಗಿರುವುದಿಲ್ಲ. ಅಲ್ಲಿ ಘಟನೆಗಳು ಸಾಂಕೇತೀಕರಣಕ್ಕೆ, ರೂಪಕಾತ್ಮಕ ಅಭಿವ್ಯಕ್ತಿಗೆ ಜಿಗಿತ ಪಡೆದುಕೊಂಡಿರುತ್ತವೆ. ಈ ರೀತಿಯ ಸಾಂಕೇತೀಕೃತ, ರೂಪಕಾತ್ಮಕ ಅಭಿವ್ಯಕ್ತಿ ಕ್ರಮವೇ ಕೃತಿಗೆ ಅದು ಸಂಸ್ಕೃತಿನೆರಳು ಮಾತ್ರವಾಗದೆ ಚಿಕಿತ್ಸಕ ದಿಕ್ಸೂಚಿಯೂ ಆಗಬಲ್ಲ ಸಾಧ್ಯತೆಯನ್ನು ಒದಗಿಸುತ್ತದೆ. ಕುಮಾರವ್ಯಾಸನ

ಭಾರತ ಕಥನದ ಕೃಷ್ಣ, ಧರ್ಮರಾಯ, ಕೌರವಾದಿ ಪಾತ್ರಗಳು ಹೀಗೆ ಜಗಿತ ಪಡೆದುಕೊಂಡಿರುವ ರೂಪಕಗಳು. ಇಲ್ಲಿನ ಎಲ್ಲ ಪಾತ್ರಗಳೂ ಬದುಕನ್ನು - ನಡತೆಯನ್ನು ಚಿಕಿತ್ಸಕವಾಗಿ ಕಂಡರಿಸುವ ಸಾಧನಗಳು. ಹೀಗಾಗಿ ಇಡೀ ಕಥನವೇ ಭಿನ್ನ ಭಿನ್ನ ರೂಪಕಗಳ ಒಕ್ಕೂಟ. ಈ ರೂಪಕಗಳ ಒಕ್ಕೂಟದ ಒಳಗೆ ಬಹು ವೈವಿಧ್ಯವಾದ ಘರ್ಷಣೆಗಳಿವೆ. ಧರ್ಮ-ಅಧರ್ಮ, ಉಚಿತ-ಅನುಚಿತ, ಕೀರ್ತಿ-ಅಪಕೀರ್ತಿ, ಒಳಿತು-ಕೆಡುಕು, ನೀತಿ-ಅನೀತಿ, ನ್ಯಾಯ-ಅನ್ಯಾಯ, ಸತ್ಯ-ಅಸತ್ಯ ಇತ್ಯಾದಿಗಳ ನಿಷ್ಕರ್ಷೆಯ ಘರ್ಷಣೆಗಳಿವು. ಈ ಘರ್ಷಣೆಗಳು ವ್ಯಕ್ತಿ, ಘಟನೆ, ಘಟನಾವಳಿ, ಕಥನದ ತುಂಬ ತುಂಬಿಕೊಂಡಿವೆ. ಕೊನೆ ಕೊನೆಗೆ ಹಲವು ಧರ್ಮ, ಹಲವು ಔಚಿತ್ಯ, ಹಲವು ಒಳಿತು, ಹಲವು ನೀತಿ, ಹಲವು ನ್ಯಾಯ, ಹಲವು ಸತ್ಯಗಳ ಸಂಘರ್ಷಗಳಾಗಿ ಇವು ಬೆಳೆಯುತ್ತವೆ. ಇದಕ್ಕೆ ಇಡೀ ಕಾವ್ಯದ ತುಂಬ ಅನೇಕ ಉದಾಹರಣೆಗಳನ್ನು ನೀಡಬಹುದು. (ಆಸಕ್ತರು ನೋಡಿ ಸಭಾ ೧೧-೩೧, ಸಭಾ ೧೩-೭೩, ಸಭಾ ೧೫-೧೬, ಕರ್ಣ ೯-೩೩, ಕರ್ಣ ೧೭-೧೯, ಕರ್ಣ ೨೬-೪೪ ಅರಣ್ಯ ೨೧-೩೫ ಇತ್ಯಾದಿ).

ನಮ್ಮ ಬಹುಪಾಲು ಕವಿಗಳು ಧರ್ಮದ ಬಗ್ಗೆ (ಅಧರ್ಮದ ಬಗ್ಗೆ) ಇನ್ನಿಲ್ಲದ ಜಿಜ್ಞಾಸೆ ನಡೆಸಿದ್ದಾರೆ. (ಧರ್ಮವೆಂದರೆ ರಿಲಿಜನ್ ಅಲ್ಲ. ಸಿಂಪಲ್ಲಾಗಿ ನಡತೆ ಅಷ್ಟೆ) ಕುಮಾರವ್ಯಾಸ ಕೂಡ ಧರ್ಮ-ಅಧರ್ಮ, ಸನ್ನಡತೆ-ದುರ್ನಡತೆಗಳ ಬಗ್ಗೆ ಕಾವ್ಯದ ತುಂಬ ಹಲವು ನೆಲೆಗಳಲ್ಲಿ ಜಿಜ್ಞಾಸೆ ನಡೆಸಿದ್ದಾನೆ. ಆದರೆ ಇವನ ಕೃಷ್ಣ ಹೇಳುವ ಒಂದು ಮಾತು ಇಲ್ಲಿ ಬಹಳ ಮುಖ್ಯ ಎನಿಸುತ್ತದೆ. 'ನುಡಿದ ಮಾತ್ರದಲಿರದು ಧರ್ಮದ ಬೆಡಗು ತಾನದು ಬೇರೆ'. (ಕರ್ಣ ೧೭-೧೩) ಧರ್ಮವೆಂಬುದು ಹಾಗೆ ಒಮ್ಮೆ ಹೇಳಿ ಮುಗಿಸಿಬಿಡುವಂಥದ್ದಲ್ಲ. ಅದು ನುಡಿದ ಮಾತ್ರವಲಿರದು. ಅದು ಪ್ರತಿಯೊಂದು ನಡೆಯಲ್ಲಿಯೂ ಮತ್ತೆ ಮತ್ತೆ ನಿರ್ವಚಿತಗೊಳ್ಳುತ್ತಿರುತ್ತದೆ.

ಇವನ ಕಾವ್ಯದಲ್ಲಿ ಧರ್ಮದ ಜೊತೆಗೇ ಬರುವ ಇನ್ನೊಂದು ಬಹು ಪುನರುಕ್ತ ವಿಚಾರವೆಂದರೆ ಕೀರ್ತಿ. ಈ ಕೀರ್ತಿ ಕೂಡ ಧರ್ಮಾವಲಂಬಿಯಾದದ್ದೇ. ಕೀರ್ತಿಯೆಂದರೆ ಸನ್ನಡತೆಯ ಫಲ. ಜನಾಭಿಪ್ರಾಯಕ್ಕೆ ತಕ್ಕಂತೆ, ಜನನಿರೀಕ್ಷೆಗೆ ತಕ್ಕಂತೆ ಬದುಕುವುದೇ ಕೀರ್ತಿ ಮಾರ್ಗ. ಕೀರ್ತಿಗೆ ಬಹು ಮುಖ್ಯವಾಗಿ ಕುಮಾರವ್ಯಾಸನ ಪ್ರಕಾರ ದೈವಾನುಗ್ರಹವಿರಬೇಕು. ದೈವಾನುಗ್ರಹವಿರಬೇಕಾದರೆ ಮಾನವ ಮೊದಲು ಧರ್ಮಾನುಯಾಯಿಯಾಗಿರಬೇಕು. ಧರ್ಮ ಅನುಸರಿಸುವುದೆಂದರೆ ಸನ್ನಡತೆ ಹೊಂದಿರುವುದು. ಈ ಸನ್ನಡತೆಯೇ ಗದುಗಿನ ಭಾರತದ ಬಹುದೊಡ್ಡ ನಿಷ್ಕರ್ಷೆಯ ವಸ್ತು. ಹೀಗೆ ಇಲ್ಲಿ ಧರ್ಮ-ಕೀರ್ತಿ, ದೈವದ ಅನುಗ್ರಹಗಳೆಲ್ಲ ಪರಸ್ಪರ ಸಂಬಂಧಿಸಿದುವು. ಹೀಗಾಗಿ ಇಲ್ಲಿನ ಭಕ್ತಿಗೂ ಒಂದು ವಿಶಾಲ ಅರ್ಥ ಇದೆ.

ದ್ರೌಪದಿಯ ವಸ್ತ್ರಾಪಹರಣದಿಂದ ಕೌರವರಿಗೆ ಅಪಕೀರ್ತಿ ಬಂತು. 'ನೆನೆದೆ ನೀನನುಚಿತವನು ಈ ಹೊತ್ತಿನಲಿ ದ್ರುಪದಾತ್ಮಜೆಯ ದೈವದ ನೆನಹಿನಲಿ ದೂರಡಗಿತು ಅರೆಬೆಳಸಾದುದು ಅಪಕೀರ್ತಿ, ವನಿತೆಯನು ಬಿಡು ಪಾಂಡುನಂದನರ ನೀನೊಲಿದಂತೆ ಮಾಡು' ಎಂದು ಕೌರವನಿಗೆ ವಿಧುರ ಹೇಳುತ್ತಾನೆ. ದ್ರೌಪದಿಯ ವಸ್ತ್ರಾಪಹರಣವನ್ನು ಕಂಡೂ ಪಾಂಡವರು ತಡೆಯದೇ ಇದ್ದದ್ದು ಕೂಡ ಅಪಕೀರ್ತಿ ಬರದಿರಲಿ ಎಂದು. ಪಾಂಡವರಿಗೆ ಇಲ್ಲಿ 'ಧಾರುಣೀಶನ ಧರ್ಮತತ್ವದ ಸಾರವುಳಿದರೆ ಸಾಕು ಮಿಕ್ಕಿನ ನಾರಿ, ಧನ, ಅಭಿಮಾನ ಬೇಹುಲಿ' (ಸಭಾ ೧೫-೧೬) ಎಂಬ ಧೋರಣೆಯಿದೆ.

ದ್ರೌಪದಿಯೊಬ್ಬಳು ಮಾತ್ರ ಇಲ್ಲಿ 'ಪತಿಗಳೆನ್ನನುಮಾರಿ ಧರ್ಮಸ್ಥಿತಿಯ ಕೊಂಡರು' ಎನ್ನುತ್ತಾಳೆ. (ಸಭಾ ೧೪-೧೦೮). ಇಲ್ಲೆಲ್ಲ ಧರ್ಮ, ಸನ್ನಡತ, ಕೀರ್ತಿಗಳು ಕಲಸಿಕೊಂಡಿವೆ. ಹೆಣ್ಣಿನ ಮಾನಾಪಮಾನವೆಂಬುದು ಗಂಡಿನ ಕೀರ್ತಿಯ ಸಂಕೇತವಾಗಿದೆ (ಸೋಜಿಗ!) (ಜೊತೆಗೆ ನೋಡಿ 'ಅಪಕೀರ್ತಿಯ ಕೆಸರ ತೊಳೆ' (ಗದಾ ೫-೨೩), 'ಜನಪನಪಕೀರ್ತ್ಯಂಗನೆಗೆ ತೊಡಸಿದನು ಭೂಷಣವ' (ಉದ್ಯೋಗ ೨-೨೨) 'ಅಕೀರ್ತಿಕಾಯವಿದಳಿವುದು ಅಗ್ಗದ ಕೀರ್ತಿಯುಳಿಯುವುದು' (ಉದ್ಯೋಗ ೯-೭೩).

ಪಂಪನ ಬಾಹುಬಲಿ - 'ಇದೇವುದಣ್ಣ ನೀನೊಲಿದ ಲತಾಂಗಿಗಂ ಧರೆಗಂ ಅಟಿಸಿದುಂದುನೆಗಳ್ತೆ ಮಾಸದೇ?' ಎನ್ನುತ್ತಾನೆ. ಹಾಗೇ ಪಂಪನ ಕರ್ಣ ಕೂಡ 'ಒಡಲುಂ ಪ್ರಾಣಮುಂ ಎಂಬಿವು ಕಿಡಿಲಾದುವು ಜಸಮದೊಂದೆ ಕಿಡದು. ಅದನಾಂ ಬಲ್ವಿಡಿವಿಡಿದು ನೆಗಳ್ದೆನ್' ಎನ್ನುತ್ತಾನೆ. (ಪಂಪಭಾರತ ೧೨-೧೮೧) ಇಲ್ಲಿ ಕೀರ್ತಿ ಯಶಸ್ಸುಗಳೆಂದರೆ ಧರ್ಮ ರೀತಿಯಿಂದ ನಡೆದುಕೊಳ್ಳುವುದಕ್ಕೆ ದೊರಕುವ ಪ್ರತಿಫಲ. ಇದೇ ಶಾಶ್ವತವಾದದ್ದು ಎಂಬ ಭಾವನೆಯಿದೆ. ಇದು ಪರದಲ್ಲಿ ಪಡೆಯುವ ಮುಕ್ತಿಗೆ ಸಮನಾದ ಇಹದಲ್ಲಿ ಪಡೆಯಬಹುದಾದ ಮುಕ್ತಿ. ತ್ಯಾಗದಿಂದ ದೊರಕುವ ಲೌಕಿಕ ಮುಕ್ತಿ. ಇದು ಸಾಮ್ರಾಜ್ಯದ ಹಾಗೆ, ದೇಹದ ಹಾಗೆ ಕೆಡುವ ಆಸ್ತಿಯಲ್ಲ. ಈ ಕೀರ್ತಿ ಅಥವಾ ಮುಕ್ತಿಯು ಹಾಗೆ ಒಮ್ಮೆ ಪಡೆದು ಮುಕ್ತಗೊಂಡು ಬಿಡುವಂಥದ್ದಲ್ಲ. ಸದಾ ನಿತ್ಯ ನಿರಂತರವಾಗಿ ಪಡೆಯುತ್ತಲೇ ಇರಬೇಕಾದದ್ದು. ಇದು ಲೋಕದಲ್ಲಿ ನಿತ್ಯ ನಡೆಯಲ್ಲಿ ಇರುವ ಸನ್ನಡತೆಯ ಗುರಿ. ಯುದ್ಧದಲ್ಲೇ ಆಗಲೆ, ತಪದಲ್ಲೇ ಆಗಲಿ, ಯಾಗದಲ್ಲೇ ಆಗಲಿ, ಪಗಡೆಯಲ್ಲೇ ಆಗಲಿ ತನ್ನ ಬದುಕಿನ ಉದ್ದಕ್ಕೂ ಮಾನವ ಗಳಿಸಬೇಕಾದದ್ದು ಈ ಆಸ್ತಿಯನ್ನೇ. ಪಂಪನ ದೊರೆ ಬಾಹುಬಲಿ ಯುದ್ಧತ್ಯಾಗ (ರಾಜ್ಯತ್ಯಾಗ) ಮಾಡಿ ತಪಸ್ಸಿಗೆ ಹೋಗುವುದು ಕೂಡ ಈ ಕೀರ್ತಿಗಾಗಿಯೇ. ಕೀರ್ತಿಯೆಂದರೆ ಮತ್ತೆ ಧಾರ್ಮಿಕತೆ - ಸನ್ನಡತೆ. ಇದೇ ಬಾಹುಬಲಿಗೆ ಇಹ ಪರಗಳೆರಡರ ಮುಕ್ತಿಮಾರ್ಗ.

ಕರ್ಣ ಕೂಡ ಯುದ್ಧಮುಂಚಿನ ದಿನಗಳಲ್ಲಿ ತಾನೇ ಹಿರಿಪಾಂಡವನೆಂದು ತಿಳಿದೂ, ದೊರೆಯಾಗುವ ಆಮಿಷಕ್ಕೆ ಮಣಿಯದೆ ದುರ್ಯೋಧನನಿಗಾಗಿ ಯುದ್ಧಕ್ಕೆ ತೊಡಗುತ್ತಾನೆ. ತೊಡಗಿಯೂ ಯುದ್ಧರಂಗದಲ್ಲಿ ತೊಟ್ಟ ಬಾಣವನ್ನು ತೊಡದೇ ಪ್ರಾಣ ತ್ಯಾಗಕ್ಕೆ ಸಿದ್ಧನಾಗುತ್ತಾನೆ. ಈ ವರ್ತನೆಯೆಲ್ಲಾ ಕೀರ್ತಿಗಾಗಿಯೇ. ಇವನಿಗೆ ಇದೇ ಧರ್ಮ. ಇದೇ ಸನ್ನಡತೆ. ಕುಮಾರವ್ಯಾಸನ ದೊರೆಗಳು ಜೂಜಿನಲ್ಲಾಗಲೀ, ರಾಜಸೂಯ ಯಾಗದಲ್ಲಾಗಲೀ, ವನವಾಸದಲ್ಲಿನ ಹಿಡಿಂಬ, ಬಕಾಸುರ ವಧೆಗಳಲ್ಲಾಗಲೀ, ಚಿತ್ರಸೇನ ಗಂಧರ್ವನ ಪ್ರಸಂಗದಲ್ಲಾಗಲೀ, ಆನಂತರದ ಕುರುಕ್ಷೇತ್ರ ಯುದ್ಧವೆಂಬ ಪಗಡೆ ಯಾಗದಲ್ಲಾಗಲೀ, ಎಲ್ಲೆಲ್ಲೂ ಇವರು ಬಾಳುವುದು ಕೀರ್ತಿಗಾಗಿ. ಈ ಕೀರ್ತಿಗಾಗಿ ಬದುಕುವುದೆಂದರೆ ಧರ್ಮರೀತ್ಯಾ ಬದುಕುವುದೆಂದೇ ಅರ್ಥ. (ಧರ್ಮದ ನಿರ್ವಚನ ಒಂದೊಂದು ನಡೆಯಲ್ಲಿಯೂ ನಡೆಯುತ್ತಿರುತ್ತದೆ. ಅದನ್ನು ಅಷ್ಟು ಸರಳವಾಗಿ ಹೇಳಿ ಮುಗಿಸಲಾಗುವುದಿಲ್ಲ. 'ಧರ್ಮದ ಬೆಡಗು ತಾನದು ಬೇರೆ. ಅದು ನುಡಿದ ಮಾತ್ರದಲಿರದು.' ಆದರೆ ಇಲ್ಲಿ ಧರ್ಮೀಯತೆ ಮತ್ತು ಕೀರ್ತಿಗಳ ನಡುವಿನ ಸಂಬಂಧ ಹೇಳಲಷ್ಟೇ ಈ ಮಾತುಗಳನ್ನು ಹೇಳಲಾಗಿದೆ.)

## ದೈವ ಮಾನವ ಸಂಘರ್ಷ

ಗದುಗಿನ ಭಾರತವು ಪೂರಾ ಕೃಷ್ಣಲೀಲೆಯ ಹಾಗೆ ಮೇಲ್ನೋಟಕ್ಕೆ ಕಾಣುತ್ತದೆ. ಆದರೆ ಅದು ಹಾಗೆ ಬರೀ ಕೃಷ್ಣ ಲೀಲೆಯಲ್ಲ. ಅದರೊಳಗೆ ಪ್ರಬಲವಾದ ದೈವಮಾನವ ಸಂಘರ್ಷವಿದೆ. ವಿಧಿಲೀಲೆ ಮತ್ತು ಮಾನವಯತ್ನಗಳ ಸಂಘರ್ಷ ಕಥನದೊಳಗೆ ಹುಟ್ಟಿಕೊಂಡಿದೆ. ಕೃಷ್ಣಕರ್ಣರ ಸಂಬಂಧದಲ್ಲಿ, ಕೌರವ-ಕೃಷ್ಣರ ಸಂಬಂಧಗಳಲ್ಲಿ ಈ ಸಂಘರ್ಷ ನೇರವಾಗಿ ಕಂಡರೆ ಇನ್ನಿತರ ಕಡೆ ಪರೋಕ್ಷವಾಗಿ ಕಾಣುತ್ತದೆ.

ಸಂಧಿಗೆಂದು ಕೌರವನಲ್ಲಿಗೆ ಹೋದ ಕೃಷ್ಣ ಸಂಧಿ ಮುರಿದು ಮರಳಿ ಬರುವಾಗ ಕರ್ಣನನ್ನು ಪ್ರತ್ಯೇಕವಾಗಿ ಕರೆದು ರಥದಲ್ಲಿ ತೊಡೆ ಸೋಂಕಿನಲ್ಲಿ ಕೂರಿಸಿಕೊಂಡು ಬಹು ಆತ್ಮೀಯವಾಗಿ ಅವನನ್ನು ಪಾಂಡವ ಪಕ್ಷಕ್ಕೆ ಪಕ್ಷಾಂತರ ಮಾಡಿಸಲು ಪಿತೂರಿ ನಡೆಸುತ್ತಾನೆ. ಕರ್ಣನನ್ನು ಅಖಿಲ ಸಾಮ್ರಾಜ್ಯದ ದೊರೆಯನ್ನಾಗಿ ಮಾಡುವ ಆಮಿಷವೊಡ್ಡುತ್ತಾನೆ. ಆತನ ಜನ್ಮರಹಸ್ಯವನ್ನೂ ತಿಳಿಸುತ್ತಾನೆ. ಕೃಷ್ಣ ಎಷ್ಟೇ ತಿಪ್ಪರಲಾಗ ಹಾಕಿದರೂ ಕರ್ಣನ ಎದುರಿಗೆ ಅವನ ಆಟ ನಡೆಯುವುದಿಲ್ಲ. ಕರ್ಣ ಕೌರವನ ಅನ್ನದ ಋಣಕ್ಕೆ, 'ತನ್ನ ಕುಲದ ಮಲಿನತೆಯನ್ನು ತೊಳೆದು' ಕ್ಷತ್ರಿಯ ಪದವಿಯನ್ನು ನೀಡಿದ ಅಂತಸ್ತಿನ ಋಣಕ್ಕೆ ನಾನು ನನ್ನ ಪ್ರಾಣ ಕೊಟ್ಟರೂ ಕಡಿಮೆಯೇ. ನನಗೆ ರಾಜಪದವಿ ಮೋಹಕ್ಕಿಂತ ಕೀರ್ತಿ ಮುಖ್ಯವೆಂದು ಪಕ್ಷಾಂತರಕ್ಕೆ ನಿರಾಕರಿಸುತ್ತಾನೆ. ಇಲ್ಲಿ ಕೃಷ್ಣನಿಗಿಂತ ಅಥವಾ ಕಾಲಧರ್ಮಕ್ಕಿಂತ ಭಿನ್ನವಾದ ಧರ್ಮ ಕರ್ಣನದು. ಇದು ಅವನದೇ ಆದ ಧರ್ಮ. ದೈವವನ್ನು ಮೀರಿದ ಮಾನವ ಧರ್ಮ.

ದ್ರೌಪದಿಯ ವಸ್ತ್ರಾಪಹರಣ ಪ್ರಸಂಗದಲ್ಲಿ ಕೌರವ ದ್ರೌಪದಿಗೆ ಈಗ ಸದ್ಯಕ್ಕೆ ನಾನೇ ನಿನಗೆ ದೈವ ಎನ್ನುತ್ತಾನೆ. (ಇಲ್ಲಿ ಪತಿದೈವಗಳು ದಾಸರಾಗಿದ್ದಾರೆ, ಕೃಷ್ಣದೈವ ಗೈರುಹಾಜರಾಗಿದ್ದಾನೆ) ಇನ್ನೂ ಮುಂದುವರೆದು ಕೌರವ 'ದೈವವೇ ದ್ರೌಪದಿಗೆ ಸೀರೆಯನೀವುದಲ್ಲದೆ ಬಿಡಿಸಲಾಪುದೇ' ಎಂದೂ (ಸಭಾ ೧೫-೧೭) ಹೇಳುತ್ತಾನೆ. ಕೊನೆಗೂ ದ್ರೌಪದಿಯನ್ನು ದಾಸ್ಯದಿಂದ ಬಿಡಿಸಲು ಕೌರವನ ಅಪ್ಪ ಧೃತರಾಷ್ಟ್ರನೇ ಬರಬೇಕಾಗುತ್ತದೆ. ಕೌರವನ ಈ ಮಾತಿಗೆ ಉತ್ತರವೆಂಬಂತೆ ಊರು ಭಂಗದ ನಂತರ ಭೀಮ ಅವನ ಕಿರೀಟ ಭಂಗ ಮಾಡಿ 'ನಿನ್ನ ಕೌರವ ಕುಲದ ಶಿಕ್ಷಾರಕ್ಷೆಗಿನ್ನಾರೊಳರು ಹೊರಬಿಗ ದೈವವುಂಟೇ ನಾನೇ ದೈವಕಣಾ' (ಗಧಾ ೬-೧೯) ಎನ್ನುತ್ತಾನೆ. ಇಲ್ಲೆಲ್ಲ ಮಾನವರೇ ಇನ್ನೊಬ್ಬರ ಸ್ಥಿತಿಗತಿಗಳನ್ನು ನಿರ್ಧರಿಸುವ - ಹಣೆಬರಹ ನಿರ್ಧರಿಸುವ - ಪಾತ್ರಗಳಂತೆ ಆಡುತ್ತಾರೆ.

ಕೊನೆಯಲ್ಲಿ ತೊಡೆ ಮುರಿದು ಬಿದ್ದ ಸುಯೋಧನ ಕೃಷ್ಣ ಮಹಿಮೆಯನ್ನೇ ಎತ್ತಿ ಆಡುತ್ತಾ 'ವೈರಬಂಧವ ಬಿತ್ತಿಕೊಂಡವ ನೀನೇ ಕೃಷ್ಣ', 'ಬಣಗುಗಳು ಭೀಮಾರ್ಜುನರು ಕಾರುಣಿಕ ನೀನು', 'ರಣವ ಹೊತ್ತಿಸಿ ನಮ್ಮ ಬೇಂಟೆಯನಾಡಿಸಿದೆ', 'ಸರ್ವಾಪರಾಧವು ನಿನ್ನದೇ', 'ಎನಗೆ ನೀ ವೈರಿಯಲ್ಲದೆ ಭೀಮನಲ್ಲ' (ಗಧಾ ೮-೩೮, ೩೯, ೪೦) ಎಂದು ಮುಂತಾಗಿ ಹೇಳುತ್ತಾನೆ. ಈ ಮಾತುಗಳೆಲ್ಲವೂ ಕೌರವನ ಮಾತುಗಳಲ್ಲ, ಕೌರವನ ಬಾಯಲ್ಲಿ ಬರುತ್ತಿರುವ ಕುಮಾರವ್ಯಾಸನ ಮಾತುಗಳು. ಕೌರವನ ಕದನದ ಬಾಲಕೇಳಿಗಳಿಂದ ಹಿಡಿದು ಪಗಡೆ, ವಸ್ತ್ರಭಂಗ, ಯುದ್ಧದವರೆಗಿನ ಅವನ ದುಷ್ಕಾರ್ಯಗಳೇ ಅವನ ಸಾವಿನ ಬೀಜಗಳೆಂದು ಹೇಳುವ ಕುಮಾರವ್ಯಾಸನೇ ಇಲ್ಲಿ 'ಧಾರುಣಿಯ

ಭಾರವ ಬಿಡಿಸಲೋಸುಗ ಕೃಷ್ಣನೇ ಕೊಂದ' ಎಂತಲೂ ಹೇಳುತ್ತಾನೆ. ಕೃಷ್ಣ ಮಹಾನ್ ಪಾಂಡವ ಪಕ್ಷಪಾತಿ ಹೇಗೋ ಹಾಗೆ ಕುಮಾರವ್ಯಾಸ ಮಹಾನ್ ಕೃಷ್ಣ ಪಕ್ಷಪಾತಿ.

ಇಡೀ ಗದುಗಿನ ಕಾವ್ಯದ ಕಥನಕ್ರಮದೊಳಗೂ ಮಾನವ ಪ್ರಯತ್ನ ಮತ್ತು ದೈವಲೀಲೆಗಳ ನಡುವೆ ಬಹುದೊಡ್ಡ ಸಂಘರ್ಷ ಎದ್ದು ಕಾಣುತ್ತದೆ. ಕೌರವನ ಸಾವು ಅವನ ಸ್ವಯಂಕೃತಾಪರಾಧದಿಂದ ಆದುದು, ಭೀಮನ ಪ್ರತಿಜ್ಞಾಪೂರ್ಣಕ್ಕೆ ಆದುದು ಎಂಬುದು ಹೇಗೆ ಸರಿಯೋ ಹಾಗೇ ಕುಮಾರವ್ಯಾಸನಿಗೆ ಕೌರವನ ಸಾವು ಕೃಷ್ಣನಿಂದ ಆದುದು ಎಂಬುದೂ ಸರಿಯೇ. 'ಕೃಷ್ಣನ ಕೆಣಕಿದಲ್ಲದೆ ವಹಿಲದಲಿ ಕೈವಲ್ಯವಿಲ್ಲ'. ಇವನು 'ಮುನಿದೊಡೆ ತಲೆಯ ಬರಹವ ತೊಡೆವನಲ್ಲದೆ ಬಳಿಕ ಸೈರಿಸನು'. (ಉದ್ಯೋಗ ೧೦-೭೫) ಇವನು ಮನಸ್ಸು ಮಾಡಿದರೆ ಮಾನವರ ಹಣೆ ಬರಹವನ್ನೇ ಅಳಿಸಿಬಿಡಬಲ್ಲ. 'ಸೂತ್ರಧರನಿರಲು ಕೊಲುವನನ್ಯರನು ಅನ್ಯರಿಂದವೆ, ಕೊಲಿಸುವನು ಕಮಲಾಕ್ಷನಲ್ಲದೆ ಉಳಿದ ಜೀವವ್ರಾತಕೀ ಸ್ವಾತಂತ್ರ್ಯವಿಲ್ಲ'. (ಉದ್ಯೋಗ ೧೦-೭೨) ಈ ಉಳಿದ ಜೀವವ್ರಾತಕೆ ಸ್ವಾತಂತ್ರ್ಯವಿಲ್ಲ ಎಂಬ ಮಾತೇ ಅಪ್ಪಟ ಸುಳ್ಳು. ನೆರಳಿಂಗೆ ಬೇರೆ ವಿವೇಕ ಚೇಷ್ಟೆಗಳಿಲ್ಲ ಎಂಬ ಮಾತು ಹೇಗೆ ಸುಳ್ಳೋ ಹಾಗೆ ಈ ಮಾತೂ ಸುಳ್ಳು. ಜೀವ ಪಾತ್ರಗಳಿಗೆ ಸ್ವಾತಂತ್ರ್ಯವಿಲ್ಲದಿದ್ದರೆ ಅವ ಸ್ವಯಂ ನಿರ್ಧಾರಗಳನ್ನು - ಕೃಷ್ಣನನ್ನೇ ಬಂಧಿಸುವಂತಹ ನಿರ್ಧಾರಗಳನ್ನು - ಹೇಗೆ ತೆಗೆದುಕೊಳ್ಳಲು ಸಾಧ್ಯ? ಪಗಡೆಯಾಟ, ಕೀಚಕವಧೆ, ಹಿಡಿಂಬವಿವಾಹ, ಊರುಭಂಗ ಪ್ರತಿಜ್ಞೆ, ಕರ್ಣನ ವಚನ ಇತ್ಯಾದಿಗಳೆಲ್ಲ ಕೃಷ್ಣನಲೀಲೆ ಖಂಡಿತಾ ಅಲ್ಲ. ಆದರೆ ಕುಮಾರವ್ಯಾಸನ ಮನದ ಮಾಯೆ ಮಾತ್ರ ಇದನ್ನೂ ಭಗವಂತನ ಲೀಲೆ ಎಂದೇ ತಿಳಿಯುತ್ತದೆ. ಆದರೆ ಭಾರತ ಕತೆಗೆ ಈ ಲೀಲೆಯ ಹಂಗಿಲ್ಲ.

ಕುಮಾರವ್ಯಾಸನ ಕೃಷ್ಣ ಭಕ್ತಿ ಬಹಳ ದೊಡ್ಡದು. ಹೀಗಾಗಿಯೇ ಇವನ ಕರ್ಣನಿಗೂ 'ಈ ಗೋಪಾಲ ಬರಿದೇ ಬಿಡನು ಜೀವವ ಕೊಳ್ಳದಿರನು' (ಉದ್ಯೋಗ ೧೦-೨೫) ಎಂದು ಗೊತ್ತಿದೆ. ಆದಾಗ್ಯೂ ಈತ ಯುದ್ಧಕ್ಕೆ ಹೋಗಲೇಬೇಕು. ಅಷ್ಟೇ ಅಲ್ಲ ಕರ್ಣ ಕೃಷ್ಣನಿಗೆ 'ನಿನ್ನಯ ವೀರರೈವರ ನೋಯಿಸೆನು ರಾಜೀವ ಸಖನಾಣೆ' ಎಂದು ಮಾತು ಕೊಡುತ್ತಾನೆ. ಅದೂ ರಾಜೀವಸಖನಾದ ಸೂರ್ಯ - ಅಪ್ಪನ ಮೇಲೆ ಆಣೆಯಿಟ್ಟು. ಹಾಗಾದರೆ ಯುದ್ಧಕ್ಕಾದರೂ ಯಾಕೆ ಹೋಗಬೇಕು? ಇವನ ಭೀಷ್ಮನಿಗೂ ಕೂಡ ರಣದಲ್ಲಿ ಸಾವು ಕಟ್ಟಿಟ್ಟ ಬುತ್ತಿ ಎಂದು ಗೊತ್ತಿದೆ. 'ಆದುದನು ಸಂಹರಿಸಿ ಮಕ್ಕಳಕಾದು, ಬಿಸುಡುವೆನೊಡಲನಾ ಸಂಗ್ರಾಮ ಭೂಮಿಯಲಿ' (ಭೀಷ್ಮಪರ್ವ ೧-೨೭) ಎಂದುಕೊಂಡೇ ಇವನು ರಣಕ್ಕೆ ಹೋಗುತ್ತಾನೆ. ಸಾಯಲಿಕ್ಕೆಂದೇ ರಣಕ್ಕೆ ಹೋಗುವುದಾದರೆ, ಯಾಕಾದರೂ ರಣಕ್ಕೆ ಹೋಗಬೇಕು. ಇಲ್ಲಿ ಯುದ್ಧಕ್ಕೆ ಹೋಗುವ ಬಹುಪಾಲು ಯೋಧರು ಸಾಯುವುದು ಖಚಿತವೆಂದು ಮೊದಲೇ ಅವರಿಗೆ ಗೊತ್ತಿದೆ. ಯಾಕೆಂದರೆ ಅದು ಕವಿಯಾದ ಕುಮಾರವ್ಯಾಸನಿಗೆ ಮೊದಲೇ ಗೊತ್ತಿದೆ. ಅಲ್ಲದೆ ಎದುರು ಪಕ್ಷದಲ್ಲಿರುವವನು ಕೃಷ್ಣನಲ್ಲವೇ!

ಕಥನದಲ್ಲಿ ಬಹುದೊಡ್ಡ ಹಸ್ತಕ್ಷೇಪ ಮಾಡಿದರೆ ಅದರಿಂದ ಹಲವು ಇಕ್ಕಟ್ಟುಗಳನ್ನು ಎದುರಿಸಬೇಕಾಗುತ್ತದೆ. ಪಂಪ ಅರಿಕೇಸರಿಯನ್ನು ಅರ್ಜುನನೊಂದಿಗೆ ಸಮೀಕರಿಸಿ ಹೇಗೆ ಹಲವು ಇಕ್ಕಟ್ಟುಗಳನ್ನು ಎದುರಿಸುತ್ತಿದ್ದಾನೋ ಹಾಗೇ ಕುಮಾರವ್ಯಾಸನೂ ಕೃಷ್ಣನೇ ಸರ್ವಲೀಲಾ ಕಾರಣನೆಂದು ಮಾಡಿ ಹಲವು ಬಿಕ್ಕಟ್ಟುಗಳನ್ನು ಎದುರಿಸುತ್ತಿದ್ದಾನೆ. ಕಾವ್ಯದುದ್ದಕ್ಕೂ ಪಾಪ-ಪುಣ್ಯ, ಕೀರ್ತಿ-ಅಪಕೀರ್ತಿ, ಉಚಿತ-ಅನುಚಿತದ ಬಗ್ಗೆ ಬಹುವಾಗಿ ತಲೆಕೆಡಿಸಿಕೊಳ್ಳುವ ಪಾಂಡವ ಪಾತ್ರಗಳು ಕೃಷ್ಣ ವಿಚಾರಕ್ಕೆ ಬಂದಾಗ 'ಪುಣ್ಯಪಾಪದ ಗೊಡವೆ ನಮಗೇಕೆ' ಎಲ್ಲಾ ಕೃಷ್ಣನಿಗೇ ಸೇರಿದ್ದು, ಕೀರ್ತಿ-ಅಪಕೀರ್ತಿಗಳ

ವಿಚಾರದಲ್ಲಿ ನಮ್ಮದೇನಿದೆ ಎಲ್ಲಾ ಶ್ರೀಕೃಷ್ಣ ಕೃಪೆ ಎಂದುಬಿಡುತ್ತಾರೆ. ಸ್ವಪ್ರಯತ್ನದ ಮಾತುಗಳ ಎದುರಿಗೇ ದೈವಲೀಲೆಯ ಮಾತುಗಳೂ, ಸ್ವಯಂಕೃತಾಪರಾಧಗಳ ಎದುರಿಗೇ ವಿಧಿಲೀಲೆಯ ಮಾತುಗಳೂ ಬಂದು ಹೋಗುತ್ತವೆ. ಈ ಸ್ಥೂಲ ವೈರುಧ್ಯ ಉಂಟಾಗಿರುವುದು ಸರ್ವಂ ಕೃಷ್ಣಮಯಂ ಎಂದು ಹೇಳುತ್ತಲೇ ಕಥನದ ಧರ್ಮವನ್ನೂ ಮೀರಲಾಗದ ಕುಮಾರವ್ಯಾಸನ ಬಿಕ್ಕಟ್ಟಿನಿಂದ.

ಅಶ್ವತ್ಥಾಮನ ಪಾತ್ರವನ್ನೂ ಕುಮಾರವ್ಯಾಸ ಇಲ್ಲಿ ಕೃಷ್ಣ ಮಹಿಮೆಯ ಪ್ರತಿಪಾದನೆಗಾಗಿಯೇ ದುಡಿಸಿಕೊಂಡಿದ್ದಾನೆ. ರನ್ನನಲ್ಲಿ ಅಶ್ವತ್ಥಾಮ ಶಿಶುಹತ್ಯಾದೋಷಿ. ತಿಳಿಯದೇ ಆವೇಶದಲ್ಲಿ ಮಕ್ಕಳನ್ನು ಕೊಂದ ಪಾಪಿ. ಹಾಗೇ ಆ ಪಾಪದ ಪ್ರಾಯಶ್ಚಿತ್ತಕ್ಕಾಗಿ ಹಿಮಾಲಯಕ್ಕೆ ತಪಸ್ಸಿಗೆ ಹೋದವ. ಆದರೆ ಕುಮಾರವ್ಯಾಸನ ಅಶ್ವತ್ಥಾಮ ತಿಳಿಯದೇ ಉಪಪಾಂಡವರನ್ನು ಕೊಲ್ಲುವುದಿಲ್ಲ. ಪಾಂಡವರ ಬೆಂಗಾವಲಿಗೆ ಕೃಷ್ಣನಿದ್ದಾನಾದ್ದರಿಂದ ಈತ ಉಪಪಾಂಡವರನ್ನೇ ಪಾಂಡವರ ಪ್ರತಿಯಾಗಿ ಕೊಲ್ಲುತ್ತಾನೆ. ಇದಕ್ಕೆ ದುರ್ಯೋಧನನೂ ಖುಷಿಪಡುತ್ತಾನೆ. ಗಾಂಗೇಯ, ದ್ರೋಣ, ಕರ್ಣರಿಗಿಂತಲೂ ಗುರುಸುತನೇ ಮೇಲೆನ್ನುತ್ತಾನೆ. ಕೊನೆಗೆ ಅಶ್ವತ್ಥಾಮ ಕುಶೀಮಂತ್ರಾಸ್ತ್ರ (ಹುಲ್ಲಿನದಳ) ಎಸೆದು ಉತ್ತರೆಯ ಗರ್ಭನಾಶಕ್ಕೂ ಯತ್ನಿಸುತ್ತಾನೆ. ಆದರೆ ವಂಶದ ಕುಡಿಯನ್ನು ಕೃಷ್ಣ ಕಾಯುತ್ತಾನೆ. ಆಗ ಕೃಷ್ಣನನ್ನು ಹೀನಾ ಮಾನಾ ಪಾಂಡವ ಪಕ್ಷಪಾತಿಯೆಂದು ಬೈದು ಅಶ್ವತ್ಥಾಮ ಹೊರಟುಹೋಗುತ್ತಾನೆ.

ಇಲ್ಲಿ ಕುರು ವಂಶವೆಲ್ಲ ನಿರ್ವಂಶವಾದದ್ದಕ್ಕೆ ಪ್ರತಿಯಾಗಿ ಪಾಂಡವವಂಶವನ್ನು (ಉತ್ತರದಾಯಿತ್ವ) ನಿರ್ವಂಶವಾಗಿಸುವ ಕೃತ್ಯ ಮಾಡಹೊರಟು ಅಶ್ವತ್ಥಾಮ ಅಷ್ಟಾದರೂ ಮುಯ್ಯಿ ತೀರಿಸುವ, ಸಾಕಿದ್ದಕ್ಕೆ ಪ್ರತಿಫಲ ನೀಡುವ ಯತ್ನ ಮಾಡುತ್ತಾನೆ. ಹಾಗೆ ನೋಡಿದರೆ ಕುಮಾರವ್ಯಾಸನ ಪ್ರಕಾರ ದುರ್ಯೋಧನನಿಗೆ ಅಷ್ಟೋ ಇಷ್ಟೋ ಸಹಾಯ ಮಾಡಿದವನೆಂದರೆ ಅಶ್ವತ್ಥಾಮನೇ. ಆದರೆ ಇಲ್ಲಿ ಪಾಂಡವರ ತಲೆ ಕಾಯುವವನೂ, ಪಾಂಡವರ ವಂಶರಕ್ಷಕನೂ ಕೃಷ್ಣನೇ. ಇದೆಲ್ಲವೂ ಕೃಷ್ಣ ಪಕ್ಷಪಾತದಿಂದ ಕುಮಾರವ್ಯಾಸ ಮಾಡಿಕೊಂಡ ಬದಲಾವಣೆ.

ಕಥನದ ಪಾತ್ರವೇ ದೈವವಾದರೆ, ಅದರ ಕವಿ ಭಕ್ತನಾದರೆ ಇನ್ನೇನಾಗಬೇಕು. ಭಕ್ತಿ ಇರುವ ಕಡೆ ಸ್ತುತಿ ಇರಲೇಬೇಕಲ್ಲ. ಅವನೇ ಎಲ್ಲದರ ನಿಯಾಮಕ. ನಾಯಕ. ಇಂಥ ಅತಿ ಭಕ್ತಿ ಕಥನದಲ್ಲಿ ಎಲ್ಲ ಕಡೆಯೂ ದೈವಪಾತ್ರಪಕ್ಷಪಾತಿಯಾಗಿ ಹಸ್ತಕ್ಷೇಪ ನಡೆಸುತ್ತದೆ. ವಸ್ತುನಿಷ್ಠತೆಯೆಂಬುದು ಪಾತ್ರ ಭಕ್ತಿಯ ಎದುರು ಗೌಣವಾಗುತ್ತದೆ. ಅವನ ಒಂದೊಂದು ನಡೆಯೂ ಮಹಾರಾಜಕೀಯವಾದರೂ ಲೀಲೆಯಾಗುತ್ತದೆ. ಕುಮಾರ ವ್ಯಾಸನಲ್ಲಿ ಆಗಿರುವುದು ಹೀಗೇ. ಭಾರತ ಕತೆಯನ್ನು ಇವನು ಕೃಷ್ಣಕತೆ ಮಾಡಲು ಹೋಗಿದ್ದಾನೆ. ಆದರೆ ಅದು ಕುಮಾರವ್ಯಾಸನಿಗೆ ಅಷ್ಟು ಸಲೀಸಾಗಿ ಬಗ್ಗಿಲ್ಲ. ಸೆಡ್ಡುಹೊಡೆದಿದೆ. ಭಕ್ತಿ ಸ್ತುತಿ, ಲೀಲಾ ಪ್ರಸ್ತುತಿ ಮತ್ತು ಕಥನದ ಪ್ರಚಂಡ ಶಕ್ತಿಗಳ ನಡುವೆ ಸೂಕ್ಷ್ಮ ಗುದ್ದಾಟ ಇರುವುದು ಕುಮಾರವ್ಯಾಸನಲ್ಲಿ ಕಾಣುತ್ತದೆ. ಭಾರತ ಕಥನ ಒಬ್ಬ ನಾಯಕನ ಕಥನವಲ್ಲ. ಅದು ಬದುಕಿನ ಹಾಗೆ ಹಲವು ನಾಯಕರ ಕಥನ. ಆದರೆ ನಮ್ಮ ಪಂಪ, ರನ್ನ, ನಾರಣಪ್ಪರೆಲ್ಲ ಒಬ್ಬೊಬ್ಬ ನಾಯಕರನ್ನು ಮಾತ್ರ ಅಲ್ಲಿ ಕಂಡಿದ್ದಾರೆ. ಅವರ ಕಾಲದ ರಾಜಕೀಯ ವ್ಯವಸ್ಥೆಯಲ್ಲಿ ನಿರಂಕುಶರಾಗಿ ಬಾಳಿದ ಏಕೈಕ ರಾಜ (ನಾಯಕರ) ಸಾಮ್ರಾಜ್ಯಶಾಹಿ ವ್ಯವಸ್ಥೆಯೇ ಅವರನ್ನು ಈ ಕಲ್ಪನೆಗೆ ದೂಡಿದೆ. ಪಂಪ-ರನ್ನರಿಗೆ ಹೋಲಿಸಿದರೆ ಕುಮಾರವ್ಯಾಸ ಲೌಕಿಕ ಆಗಮಿಕಗಳೆರಡನ್ನೂ ಒಂದೇ ಆಗಿ ಕಂಡಿದ್ದಾನೆ. ಇವನು ರಾಜರನ್ನು ನಾಯಕರನ್ನಾಗಿ ಮಾಡಿಕೊಂಡಿಲ್ಲ. ಭಕ್ತಿ ಪ್ರತೀಕವೆಂಬಂತೆ

ಕೃಷ್ಣನನ್ನೇ ನಾಯಕನನ್ನಾಗಿ ಮಾಡಿಕೊಂಡಿದ್ದಾನೆ. ಹರಿಹರನು ಪ್ರಭುತ್ವಕ್ಕೊಂದು ಪರ್ಯಾಯವೆಂಬಂತೆ ದೈವಭಕ್ತಿಯನ್ನು ಕಟ್ಟಲು ಹೊರಟಿರುವುದರ ಭಾರತ ವಿಸ್ತರಣೆಯ ಹಾಗೆ ಕುಮಾರವ್ಯಾಸ ಕಾಣುತ್ತಾನೆ. ಆದರೆ ರಾಜಕೀಯ ಪ್ರಭುತ್ವಕ್ಕೊಂದು ಪರ್ಯಾಯವೆಂಬಂತೆ ಭಕ್ತಿ ಪಾರಾಯಣದ ಕಾವ್ಯವನ್ನು ಕಟ್ಟಲು ಕುಮಾರವ್ಯಾಸ ಪ್ರಯತ್ನಿಸಿರುವನಾದರೂ ಇಲ್ಲಿ 'ಭಕ್ತರ ಬಂಡಿಯ ಬೋವ' ಶ್ರೀಕೃಷ್ಣನೇ ಮಹಾನ್ ರಾಜಕೀಯ ಕಾರ್ಯಶೀಲತೆಯ ಪಾತ್ರವಾಗಿ ಬೆಳೆದುಬಿಟ್ಟಿದ್ದಾನೆ. ದೈವಮಾನವ ಯುಕ್ತಿ ಶಕ್ತಿಗಳು ಬೆರೆತುಕೊಂಡ ಒಬ್ಬ ಮಹಾನ್ ರಾಜಕೀಯ ನಾಯಕನಂತೆಯೇ ಇಲ್ಲಿ ಕೃಷ್ಣ ಕಾಣುತ್ತಾನೆ. ಇವನ ಕಾವ್ಯ ಆ ಕಾಲದ ಸಂಸ್ಕೃತಿಯ ನೆರಳಾಗಿ ಮಾತ್ರ ಉಳಿದಿಲ್ಲ ಎಂಬುದಕ್ಕೆ ಇಲ್ಲಿ ಈ ಕೃಷ್ಣನೇ ಸಾಕ್ಷಿ.

ಕೊನೆಯಲ್ಲಿ ಯುದ್ಧ ಮುಗಿದು ಪಟ್ಟವಾದ ನಂತರ ಪಾಂಡವರು ಏನಾಗುತ್ತಾರೆ ಎಂಬುದಕ್ಕೆ ಕುಮಾರವ್ಯಾಸ ಎರಡು ಪದ್ಯಗಳಲ್ಲಿ ಸೂಚನೆ ಕೊಡುತ್ತಾನೆ.

ಆ ಸುಯೋಧನನರಮನೆಯನವ
ನೀಶ ಹೊಕ್ಕನು ಪವನ ಸುತ ದು
ಶ್ಯಾಸನನ ಸದನವನು ಪಾರ್ಥಗೆ ಕರ್ಣಭವನದಲಿ
ವಾಸವಾದುದು ಯಮಳರಿಗೆ ದು
ಶ್ಯಾಸನಾನುಜರರ ಮನೆಗಳು ಉಳಿ
ದೈಸುಮನೆ ಭಂಡಾರವಾದುದು ಭೂಪ ಕೇಳೆಂದ.

ಮನ್ನಣೆಯಲಿ ಯುಯುತ್ಸು ಹೊಕ್ಕನು
ತನ್ನ ಮನೆಯನು ಭೀಷ್ಮಗುರು ಕೃಪ
ರುನ್ನತಾಲಯವಾಯ್ತು ನೃಪನ ಪಸಾಯ್ತಸಂತತಿಗೆ
ಮುನ್ನಿನವರೇ ಮಂತ್ರಿ ಸಚಿವರು
ಮುನ್ನದಾವಂಗಾವ ಪರುಠವ
ಭಿನ್ನವಿಲ್ಲದೆ ಪೌರಜನವೆಸೆದಿರ್ದುದಿಭಪುರಿಯ (ಗಧಾ ೧೩-೯, ೧೦)

ಮುನ್ನದೆ - ಯಾರಿಗೂ ಏನೂ ವ್ಯತ್ಯಾಸವಿಲ್ಲದೆ ವ್ಯವಸ್ಥೆ ಹಾಗೇ ಇರುವುದಾದರೆ, ಬರೀ ರಾಜರು ಮಾತ್ರ ಬದಲಾಗುವುದಾದರೆ, ಇಷ್ಟಕ್ಕೆ ಕೃಷ್ಣನೇ ಬೇಕಾಗಿತ್ತಾ?....

ಇದು ಕೃಷ್ಣನೊಬ್ಬನ ಕಥನವಲ್ಲ. ಬಹುನೆಲೆಯ, ಬಹುಜನರ ಕಥನ. ಇವರೆಲ್ಲರಲ್ಲಿ ಕೃಷ್ಣನೂ ಒಬ್ಬ.

□

---

ರಾಮಲಿಂಗಪ್ಪ ಟಿ. ಬೇಗೂರು, ನಂ. ೪೭, ನಾಲ್ಕನೇ ಕ್ರಾಸು, ನಾಲ್ಕನೇ ಮೇನು
ಬಾಲಾಜಿ ಕಲ್ಯಾಣ ಮಂಟಪದ ಹತ್ತಿರ, ಬನಶಂಕರಿ ಮೂರನೇ ಹಂತ, ಬೆಂಗಳೂರು-೮೫

# ಪರಿಸರವಾದದ 'ದ್ವೈತ' ಸಮಸ್ಯೆ

ಟಿ.ಎಸ್. ವಿವೇಕಾನಂದ

"ಯಾವುದೇ ಪ್ರದೇಶದಲ್ಲಿ ಕಾಣುವ ಈ ಪರಿಸರವಾದಿಗಳನ್ನು ನೀವು ತುಂಬಾ ಸುಲಭವಾಗಿ ಗುರುತು ಹಿಡಿಯಬಹುದು. ಹೇಗೆಂದರೆ ತುಂಬಾ ಸಹಜವಾಗಿ ಅವರು ಆಯಾ ಪ್ರದೇಶಗಳ ಅರಿಸ್ಟೋಕ್ರಾಟ್ ಹಿನ್ನೆಲೆಯವರಾಗಿರುತ್ತಾರೆ. ಇವರಿಗೆ ಬದುಕಿನ ಭದ್ರತೆಯ ಚಿಂತೆ ಇರುವುದಿಲ್ಲ. ಅಂದರೆ ಅವರು ಸುಭದ್ರ ಹಿನ್ನೆಲೆಯವರಾಗಿರುತ್ತಾರೆ" ಇದು ಇತ್ತೀಚಿನ ಮಾತಲ್ಲ. ೧೯೭೭ರಲ್ಲಿಯೇ ಅಮೆರಿಕಾದ ಪತ್ರಕರ್ತ ವಿಲಿಯಂ ಟುಕರ್ ಹೇಳಿದ್ದ ಮಾತಿದು.

೧೯೭೦ರ ದಶಕದಲ್ಲಿ ಈ ದೇಶಕ್ಕೆ ಕಾಲಿಟ್ಟ ಹುಲಿ ಸಂರಕ್ಷಣಾ ಯೋಜನೆಯ ಕಾರಣದಿಂದಾಗಿ ಕರ್ನಾಟಕದ ಬಂಡೀಪುರ, ನಾಗರಹೊಳೆ ಅರಣ್ಯಗಳಲ್ಲಿ ತಲೆತಲಾಂತರಗಳಿಂದ ಬದುಕಿದ್ದ ಸೋಲಿಗರು, ಕಾಡು ಕುರುಬರು, ಜೇನು ಕುರುಬರು ಹಾಗೂ ಇನ್ನಿತರ ಎಲ್ಲಾ ಆದಿವಾಸಿಗಳನ್ನೂ ಅಲ್ಲಿಂದ ಸ್ಥಳಾಂತರಿಸಲಾಯಿತು. ಇದನ್ನು ಪ್ರತಿಭಟಿಸಿ ಅನೇಕ ಪ್ರಯತ್ನಗಳು ನಡೆದವು. ಆದರೆ ನಮ್ಮ ಅರಣ್ಯ ಮತ್ತು ಪೋಲಿಸ್ ಪ್ರಭುತ್ವ ಅದನ್ನೆಲ್ಲಾ ನಿರ್ದಾಕ್ಷಿಣ್ಯವಾಗಿ ಹತ್ತಿಕ್ಕಿಬಿಟ್ಟಿತು.

ಈ ಪಟ್ಟಿಯಲ್ಲಿ ಆಂಧ್ರಪ್ರದೇಶದ ಕೃಷ್ಣಾ ನದಿ ಕಣಿವೆಯ ಕಾಡುಗಳಲ್ಲಿ ವಾಸಿಸುವ 'ಚಂಚು' ಆದಿವಾಸಿಗಳೂ ಸೇರಿದ್ದಾರೆ. ಹುಲಿಗಳ ಸಂರಕ್ಷಣೆಗಾಗಿ ಇವರು ತಮ್ಮ ಬದುಕನ್ನೇ ತೆರಬೇಕಾಯಿತು. ಇವರನ್ನು ಕಾಡಿನಿಂದ ಹೊರಹಾಕಲಾಯಿತು. ಆಗ ಇವರ ನಾಯಕನೊಬ್ಬ ಪ್ರತಿಭಟನೆಗೆಂದು ಹೈದರಾಬಾದಿಗೆ ಬಂದಿದ್ದಾಗ "ನಿಮಗೆ ಹುಲಿಗಳ ಬಗ್ಗೆ ಅಷ್ಟೊಂದು ಅಕ್ಕರೆ ಇದ್ದರೆ ಅವುಗಳನ್ನು ಯಾಕೆ ನಿಮ್ಮ ಈ ನಗರಕ್ಕೇ ತಂದು ಬಿಟ್ಟುಕೊಳ್ಳಬಾರದು? ಇಡೀ ನಗರವನ್ನು ಹುಲಿ ಸಂರಕ್ಷಣಾ ನಗರವೆಂದು ಘೋಷಿಸಬಾರದು?" ಎಂದು ಕೇಳಿದ.

ಈ ನಮ್ಮ ಏಷ್ಯಾಟಿಕ್ ಹುಲಿಗಳ ಸೋದರ ಸಂಬಂಧಿಗಳಾದ ಸೈಬೀರಿಯಾದ ಹುಲಿಗಳನ್ನು ಸಂರಕ್ಷಿಸುವ ಯೋಜನೆಯೂ ಇದೇ ಸಂರಕ್ಷಣಾ ಯೋಜನೆಯ ಅಂತರ್ಗತ ಭಾಗವಾಗಿತ್ತು. ಸೈಬೀರಿಯಾದಲ್ಲೂ ಈ ಪ್ರಯತ್ನ ನಡೆಯಿತು. ಅಲ್ಲಿನ ೫೦೦೦ ಮಂದಿ ಮೂಲನಿವಾಸಿಗಳನ್ನು ಅಲ್ಲಿಂದ ಎತ್ತಂಗಡಿ ಮಾಡಿಸುವ ಪ್ರಯತ್ನ ನಡೆಯಿತು. ಆಗ ಅಲ್ಲಿದ್ದ ಪ್ರಶ್ನೆ ಎಂದರೆ..., "ನಮ್ಮ ಹೊಟ್ಟೆ ಪಾಡಿನ ಗಳಿಕೆಗೆ ಉಳಿದಿರುವುದು ಕೆಲವೇ ಕೆಲವು ಕ್ಷೀಣ ಮಾರ್ಗಗಳು. ಇವುಗಳಲ್ಲಿ ದಿನವೆಲ್ಲಾ ದುಡಿದರೂ ಹೊಟ್ಟೆಗಾದರೆ ಬಟ್ಟೆಗೆ ಸಾಲದು ಎಂಬಂತಿದೆ. ಅದೇ ಒಂದು ಹುಲಿಯನ್ನು ಹೊಡೆದರೆ ಕನಿಷ್ಟ ೫೦೦೦ ಡಾಲರ್ ಹಣ ಸಿಗುತ್ತದೆ. ಇದರಿಂದ ನಮ್ಮ ವರ್ಷದ ಕನಿಷ್ಠ ಕೊರತೆಗಳು ನೀಗುತ್ತವೆ" ಎಂಬುದು.

ಆದರೆ ಆಯಾ ಪ್ರಭುತ್ವಗಳು ಈ ಯಾರನ್ನೂ ಬಿಡಲಿಲ್ಲ. ಎಲ್ಲರನ್ನೂ ಬಲಾತ್ಕಾರದಿಂದ ಕಾಡಿನಿಂದ ಹೊರಹಾಕಿದರು. ಇವರ ಗುಂಪಿನಲ್ಲಿ ಜೀವ ವಿಕಾಸ ಚರಿತ್ರೆಯಲ್ಲಿ ಪ್ರಖ್ಯಾತವಾದ ಗಲಪೊಗಸ್ ದ್ವೀಪದ ಮೂಲನಿವಾಸಿಗಳೂ ಸೇರಿದ್ದಾರೆ.

ಆಯಾ ಪ್ರಭುತ್ವಗಳು ಇವರ ಮೇಲೆ ಅನೇಕ ಆಪಾದನೆಗಳನ್ನು ಹೊರಿಸಿವೆ. ಇದರಲ್ಲಿ ಇವರು ಕಾಡನ್ನೂ, ಕಾಡು ಪ್ರಾಣಿಗಳನ್ನೂ ನಾಶ ಮಾಡುತ್ತಾರೆ ಎಂಬುದು ಮುಖ್ಯವಾದದ್ದು. ಮೇಲು ನೋಟಕ್ಕೆ ಇದೆಲ್ಲಾ ಸರಿ ಎಂಬಂತೆಯೇ ಕಾಣುತ್ತದೆ. ಆದರೆ ಸತ್ಯ ಸಂಗತಿ ಏನು? ಏಕೆ ಹುಲಿ, ಆನೆಗಳನ್ನು ಸಂರಕ್ಷಿಸಬೇಕಾದ ಸ್ಥಿತಿ ಬಂದಿದೆ. ಈವರೆಗೂ ಇದ್ದ ಹುಲಿ, ಆನೆಗಳ ಅಗಾಧ ಸಮುದಾಯವನ್ನು ನಾಶ ಮಾಡಿದವರು ಯಾರು? ಅಲ್ಲಿನ ಆದಿವಾಸಿ, ಮೂಲ ನಿವಾಸಿಗಳೇ? ಅಥವಾ...?

ಈ ಕೆಲವು ತಮಾಷೆಯ ವಿವರಗಳನ್ನು ನೋಡಿ! ಭರತಪುರದ ಮಹಾರಾಜ ತನ್ನ ಎಂಟನೆಯ ವಯಸ್ಸಿನಲ್ಲಿಯೇ ಮೊದಲ ಹುಲಿ ಶಿಕಾರಿ ಮಾಡಿದ್ದ. ಇದೇ ಮಹಾರಾಜ ತನ್ನ ಅರಮನೆಯ ರಿಸೆಪ್ಷನ್‌ಹಾಲಿನ ನೆಲಕ್ಕೆ ಒಂದಿಂಚೂ ಬಿಡದಂತೆ ಹುಲಿಯ ಚರ್ಮಗಳನ್ನೇ ಹಾಸಿದ್ದ. ಇವೆಲ್ಲಾ ಅವನೇ ಕೊಂದ ಹುಲಿಯ ಚರ್ಮಗಳು. ಇವನಿಗೆ ಪ್ರತಿಸ್ಪರ್ಧೆ ಎನ್ನುವಂತೆ ಗ್ವಾಲಿಯರ್ ಮಹಾರಾಜ ತನ್ನ ಜೀವಿತದ ಅವಧಿಯಲ್ಲಿ ೧೪೦೦ ಹುಲಿಗಳನ್ನು ಕೊಂದಿದ್ದ. ಉತ್ತರ ಪ್ರದೇಶದ ಜಿಮ್ ಕಾರ್ಬೆಟ್ಟನ ಸಮಕಾಲೀನನಾದ ಬಲರಾಂಪುರದ ಪ್ರಸಿದ್ಧ ಹರ್ಸೆ ಮನೆತನದ ಟಾಮ್ ಇನ್ನೇಸ್ ಎಂಬುವನು "ಹೋಗಯ್ಯಾ..., ನಾನು ಹದಿನೈದು ವರ್ಷಗಳ ಹಿಂದೆಯೇ ೧೦೦ ಹುಲಿಗಳನ್ನು ಕೊಂದಿದ್ದೆ. ಈಗ ಕೊಂದ ಹುಲಿಗಳ ಎಣಿಕೆಯನ್ನೇ ಬಿಟ್ಟುಬಿಟ್ಟಿದ್ದೇನೆ" ಎಂದು ಹೇಳುತ್ತಿದ್ದನಂತೆ.

ಹುಲಿಯೊಂದು ತನ್ನ ಹಸಿವಿಗಾಗಿ ಜಿಂಕೆಯನ್ನು ಕೊಲ್ಲುವುದು ಸಹ ಶಿಕಾರಿಯೇ. ಆದರೆ ಇದು 'ನೈಸರ್ಗಿಕ ಶಿಕಾರಿ' 'ಉಳಿವಿನ ಶಿಕಾರಿ'. ಮೈಸೂರು, ಭರತಪುರ, ಗ್ವಾಲಿಯರ್ ಮಹಾರಾಜರುಗಳಿಂದ ಆದ ಹುಲಿ, ಆನೆಗಳ ಹತ್ಯೆಗಳು 'ತೆವಲು/ಪ್ರತಿಷ್ಠೆಯ ಶಿಕಾರಿ' ಯಾಗುತ್ತದೆ. ತಮ್ಮ ಸರ್ವಸ್ವಕ್ಕೂ ಬಫೆಲೊ ಎಂಬ ಕಾಡೆಮ್ಮೆಗಳನ್ನೇ ಅವಲಂಭಿಸಿದ್ದ ಅಮೆರಿಕಾದ ಮೂಲನಿವಾಸಿಗಳಾದ ರೆಡ್ಡಿಂಡಿಯನ್ನರನ್ನು ನಾಮಾವಶೇಷ ಮಾಡುವ ಉದ್ದೇಶದಿಂದಲೇ ಅಲ್ಲಿನ ವಸಾಹತು ಯುರೋಪಿಯನ್ ಆಕ್ರಮಣಕಾರರು ಬಫೆಲೊಗಳನ್ನು ನಾಮಾವಶೇಷದ ಅಂಚಿಗೆ ತಂದಿದ್ದು 'ಕ್ರೌರ್ಯದ, ಪ್ರತೀಕಾರದ, ರಾಜಕೀಯ ಪ್ರೇರಿತ ಶಿಕಾರಿ'. ಹೀಗೆ ಈ ಅರಿಸ್ಟೋಕ್ರಾಟ್

ವರ್ಗದ ಕ್ರೌರ್ಯ ಶಿಕಾರಿಯ ರೂಪದಲ್ಲಿ ಪ್ರಕಟವಾಗುವುದನ್ನು ಇತಿಹಾಸ ದಾಖಲಿಸಿದೆ. ಇವರ ಭವನಗಳಲ್ಲೆಲ್ಲಾ ಆನೆ, ಹುಲಿಗಳ ಚರ್ಮ, ದಂತ, ಪ್ರತಿಕೃತಿಗಳಿವೆ. ಇವು ಅವರ ಪ್ರತಿಷ್ಠೆಯ ಸಂಕೇತಗಳಾಗಿವೆ.

ಇದೇ ಹೊತ್ತಿನಲ್ಲಿ ಈ ಜಗತ್ತಿನ ಯಾವುದೇ ಮೂಲನಿವಾಸಿ ಯಾ ಆದಿವಾಸಿ ಸಮುದಾಯಗಳು ಹೀಗೆ ಸಾರಾಸಗಟಾಗಿ ವನ್ಯ ಪ್ರಾಣಿಗಳನ್ನು ತೆವಲಿಗಾಗಿ ಕೊಂದ ಒಂದೇ ಒಂದು ಉಲ್ಲೇಖವಿಲ್ಲ. ಯಾವೊಬ್ಬ ಆದಿವಾಸಿಯ ಮನೆಯಲ್ಲೂ ಈ ಹುಲಿ, ಆನೆಗಳ ಚರ್ಮ, ದಂತ, ಪ್ರತಿಕೃತಿಗಳಿಲ್ಲ. ಅಧಿಕಾರದ ಪಿಗ್ಮಿಗಳು ಮೊದಲೇ ಕುಳ್ಳರು, ಅವರಿಗೆ ಸಿಂಹ, ಸೀಳುನಾಯಿಗಳಿಗಿಂತ ಆನೆಗಳನ್ನು ಕಂಡರೆ ಹೆಚ್ಚು ಭಯ. ಅದು ಒಮ್ಮೆ ಕಾಲಿಟ್ಟರೆ ಇಡೀ ಅವರ ಗುಡಿಸಲುಗಳ ಸಮೂಹವೇ ಸರ್ವನಾಶವಾಗಿಬಿಡುತ್ತದೆ. ಆದರೂ ಇವರು ತಮ್ಮ ತಂಟೆಗೆ ಬಂದ ಆನೆಗಳನ್ನು ಮಾತ್ರ ಕೊಲ್ಲುತ್ತಾರೆ. ಅವರಿಗೆ ಚರ್ಮ ಮಾತ್ರ ಬೇಕು. ಛಳಿ-ಮಳೆಯಿಂದ ರಕ್ಷಿಸಿಕೊಳ್ಳಲು. ದಂತಗಳನ್ನು ಅವರು ಹತ್ತಿರದ ಬಾಳೆಗಿಡಗಳಿಗೆ ಊರುಗೋಲು ಕೊಡುತ್ತಾರೆ. ಅದರ ಉಪಯೋಗ ಅಷ್ಟಕ್ಕೇ ಸೀಮಿತ. ಆನೆ ಸತ್ತು ಬಿದ್ದಾಗ ಹೇಳುತ್ತಾರೆ....,

**ಗುರಿ ತಪ್ಪಿತು ಈ ಈಟಿ, ಓ ನಮ್ಮಪ್ಪ ಆನೆಯೇ!**
**ಅಪ್ಪಿತಪ್ಪಿ ನಿನ್ನನ್ನಿರಿಯಿತು, ಓ ನಮ್ಮಪ್ಪ ಆನೆಯೇ!**
**ನಿನ್ನನ್ನು ಕೊಲ್ಲೋ ಯೋಚನೆ ಇರ್ಲಿಲ್ಲ**
**ಇರ್ಲಿಲ್ಲ ನಿನ್ನ ಕೊಲ್ಲೋ ಯೋಚನೆ, ಓ ನಮ್ಮಪ್ಪ ಆನೆಯೇ!**
**ತುಳೀಬೇಡ ನಮ್ಮ ಗುಡ್ಲು, ಓ ನಮ್ಮಪ್ಪ ಆನೆಯೇ!**

ಇದು ಅವರ ಆನೆಯೊಟ್ಟಿಗಿನ ಸ್ನೇಹ, ಸಲಿಗೆ, ಈರ್ಷ್ಯೆಯ ಸಂಬಂಧದ ಸಾಂಸ್ಕೃತಿಕ ಸಂಕೇತ.

ಈಗ ನಮ್ಮ ಒಬ್ಬ ಆದಿವಾಸಿ ಒಂದು ಹುಲಿಯನ್ನೋ ಅಥವಾ ಆನೆಯನ್ನೋ ಕೊಂದನೆಂದೇ ಇಟ್ಟುಕೊಳ್ಳೋಣ! ಆದರೆ ಅದನ್ನು ಖರೀದಿಸುವ, ಉಪಯೋಗಿಸುವ ಗ್ರಾಹಕರು ಯಾರು? ಏಕೆ ಈ ವನ್ಯ ಪ್ರಾಣಿಗಳ ಅಂಗಾಂಗಳಿಗೆ ಅಷ್ಟೊಂದು ಬೇಡಿಕೆ ಇದೆ. ಈ ಬೇಡಿಕೆ ಹುಟ್ಟಿಕೊಳ್ಳುವುದು ಹಾಗೂ ಅದು ವೃದ್ಧಿಯಾಗುವುದು ಯಾರಿಂದ? ಸಾವಿರಾರು ಡಾಲರ್ ಹಣ ಕೊಟ್ಟು ಒಂದು ಹುಲಿ ಚರ್ಮದ ಧಿಮಾಕಿನ ಚೀಲವನ್ನೋ, ಜರ್ಕೀನನ್ನೋ ಕೊಳ್ಳುವವರು ಯಾರು? ಆನೆಕಾಲಿನಿಂದ ಮಾಡಿದ ಸ್ಟೂಲುಗಳನ್ನು ತಮ್ಮ ಮನೆಯ ಬಾರುಗಳಲ್ಲಿ ಅಲಂಕಾರಕ್ಕೆ ಬಳಸುವವರು ಯಾರು? ಆನೆ ದಂತದ ಆಂಟಿಕ್‌ಗಳನ್ನೂ, ಪ್ರತಿಮೆಗಳನ್ನೂ ಖರೀದಿಸುವ ಜನ ಯಾರು? ಇವರಿಗೆ ಇಷ್ಟೊಂದು ಹಣ ಬಂದಿದ್ದು ಎಲ್ಲಿಂದ?

ಇಲ್ಲಿಂದ "ಪರಿಸರವಾದದ ದ್ವೈತ ಸಮಸ್ಯೆ" ಆರಂಭವಾಗುತ್ತದೆ. ತುಂಬಾ ಸ್ಪಷ್ಟವಾಗಿರುವಂತೆ ಇಲ್ಲಿ ಎರಡು ಬಗೆಯ ಪರಿಸರವಾದಗಳಿವೆ. ಒಂದು "ಶ್ರೀಮಂತರ ಪರಿಸರವಾದ". ಇನ್ನೊಂದು "ಬಡವರ ಪರಿಸರವಾದ". ಈಗ ಈ ಆನೆ, ಹುಲಿಗಳೇ ಮೊದಲಾದ ವನ್ಯ ಜೀವಿಗಳನ್ನು ರಕ್ಷಿಸಬೇಕೆಂದು, ಜೀವ ವೈವಿಧ್ಯಕ್ಕೆ ಇದು ಅಗತ್ಯವೆಂದು ಬೊಬ್ಬೆ ಹಾಕುವ ಶ್ರೀಮಂತ ಪರಿಸರವಾದಿಗಳು

ಒಂದು ಕಡೆಯಾದರೆ, ಶತಮಾನಗಳಿಂದಲೂ ಕೇವಲ ಹೊಟ್ಟೆಗಾಗಿ ನಿರಂತರವಾಗಿ ಹೋರಾಡುತ್ತಿರುವ ಜನ ಸಮುದಾಯಗಳನ್ನು ರಕ್ಷಿಸುವುದು, ಅವರ ಆತ್ಮಗೌರವವನ್ನು ರಕ್ಷಿಸುವುದು ಅಷ್ಟೇ ಮುಖ್ಯವೆಂದು ವಾದಿಸುವ ಬಡ ಪರಿಸರವಾದಿಗಳು ಇನ್ನೊಂದು ಕಡೆ ಇದ್ದಾರೆ. ನಿಜವಾದ ಪರಿಸರ ಈ ಎರಡರ ನಡುವೆ ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದಿದೆ.

ಈ ಎರಡೂ ವಾದಗಳನ್ನು ಬೌದ್ಧಿಕವಾಗಿ ಹಾಗೂ ಭೌಗೋಳಿಕವಾಗಿ ವಿಂಗಡಿಸುವುದಾದರೆ..., ಮೊದಲು ಪ್ರಾಣಿ-ಪಕ್ಷಿ ಸಂರಕ್ಷಣೆಯು ಬೌದ್ಧಿಕವಾಗಿ ಹುಟ್ಟಿದ್ದು ಕಾಡು-ಸಂಪನ್ಮೂಲಗಳಿಂದ ಬಹುದೂರದಲ್ಲಿರುವ, ಆದರೆ ಈ ಸಂಪನ್ಮೂಲಗಳ ಲೂಟಿಯಿಂದಲೇ ಹೊಟ್ಟೆ ತುಂಬಿಸಿಕೊಂಡು, ಅಗಾಧ ಐಶ್ವರ್ಯವಂತರಾಗಿರುವ, ಈ ಎರಡು ಸವಲತ್ತುಗಳ ಕಾರಣದಿಂದಲೇ ತಾವು ನಾಗರಿಕರೆಂದು ಘೋಷಿಸಿಕೊಂಡ ಸಮುದಾಯಗಳಿಂದ. ಹಾಗೆಯೇ ಭೌಗೋಳಿಕವಾಗಿ ವಿಂಗಡಿಸುವುದಾದರೆ ಈ ಭೂಗೋಳದ ಉತ್ತರಾರ್ಧದ ದೇಶಗಳಿಂದ. ಎರಡನೆಯ ಬಡವರ ಪರಿಸರವಾದ ಹುಟ್ಟುವುದು ಮೇಲಿನ ಶ್ರೀಮಂತರ ಹಣ, ಶಿಕ್ಷಣ, ವಿಜ್ಞಾನ, ಈ ವಿಜ್ಞಾನವನ್ನೇ ಆಧರಿಸಿರುವ ತಂತ್ರಜ್ಞಾನ ಹಾಗೂ ಆಧುನಿಕ ಯುದ್ಧೋಪಕರಣಗಳಿಂದ ನಿರಂತರವಾಗಿ ಶೋಷಿಸಲ್ಪಟ್ಟ ಬಡ ಅವಿದ್ಯಾವಂತ ಹಾಗೂ ಅವರ ಸಾಪೇಕ್ಷದಲ್ಲಿ ಅನಾಗರಿಕರಾದ ಜನರಿಂದ. ಭೌಗೋಳಿಕವಾಗಿ ದಕ್ಷಿಣಾರ್ಧಗೋಲದ ಜನರಿಂದ.

ಇಲ್ಲಿ ಉತ್ತರಾರ್ಧವೆಂದರೆ ಇಡಿಯಾಗಿ ಉತ್ತರ ಭೂಗೋಳವಲ್ಲ, ಅಲ್ಲಿ ಲ್ಯಾಟಿನ್ ಅಮೆರಿಕಾ ಇದೆ. ಇತ್ತ ದಕ್ಷಿಣಾರ್ಧವೆಂದರೆ ಪೂರ್ತಿ ದಕ್ಷಿಣ ಭಾಗವಲ್ಲ, ಇಲ್ಲಿ ಜಪಾನು ಹಾಗೂ ಭಾರತದ ನೂರುಕೋಟಿಯ ಮೇಲಿನ ಚಿಲ್ಲರೆ ಶೂನ್ಯಗಳಿವೆ. ಅಂದರೆ ಈ ಗೋಲಾರ್ಧಗಳು ಪ್ರತಿಯೊಂದು ದೇಶದಲ್ಲೂ ಇವೆ. ಪ್ರತಿಯೊಂದು ಜನಾಂಗದಲ್ಲೂ ಇವೆ.

ಈ ಗೋಲಾರ್ಧಗಳ ಜನರಿಗೆ ಆ ಶ್ರೀಮಂತಿಕೆ ಬಂದಿದ್ದು ಎಲ್ಲಿಂದ?

ಒಮ್ಮೆ ನಾವೆಲ್ಲಾ ಮಹಾ ನಾಯಕನೆಂದು ಓದಿರುವ ಚಕ್ರವರ್ತಿ ಅಲೆಗ್ಸಾಂಡರನ ಸೈನ್ಯ ಒಬ್ಬ ಕಡಲುಗಳ್ಳನನ್ನು ಬಂಧಿಸಿ ಅವನ ಮುಂದೆ ಹಾಜರುಪಡಿಸುತ್ತದೆ. ವಿಚಾರಣೆಯ ಹೊತ್ತಿನಲ್ಲಿ ಅಲೆಕ್ಸಾಂಡರ್ ಕಡಲುಗಳ್ಳನನ್ನು ಕೇಳುತ್ತಾನೆ..., "ನೀನೇಕೆ ಹೀಗೆ ಹಡುಗುಗಳನ್ನು ಕೊಳ್ಳೆ ಹೊಡೆಯುತ್ತೀಯ?" ಅದಕ್ಕೆ ಕಡಲುಗಳ್ಳ ಕೇಳುತ್ತಾನೆ..., "ನೀನೇಕೆ ಹೀಗೆ ಜಗತ್ತನ್ನೇ ಕೊಳ್ಳೆ ಹೊಡೆಯುತ್ತಿದ್ದೀಯ?" ವ್ಯತ್ಯಾಸ ಇಷ್ಟೇ! "ನನ್ನ ಬಳಿ ಒಂದೇ ಒಂದು ಹಡಗಿದೆ, ಕೆಲವೇ ಮಂದಿ ಸಹಾಯಕರಿದ್ದಾರೆ. ಆದ್ದರಿಂದ ಜನ ನನ್ನನ್ನು ಕಡಲುಗಳ್ಳನೆನ್ನುತ್ತಾರೆ. ನಿನ್ನ ಬಳಿ ಒಂದು ನೌಕಾಪಡೆಯೇ ಇದೆ. ಆದ್ದರಿಂದ ಅದೇ ಜನ ನಿನ್ನನ್ನು ಚಕ್ರವರ್ತಿ ಎನ್ನುತ್ತಾರೆ" ಎಂದು ಹೇಳುತ್ತಾನೆ.

ಈ ಸಂಭಾಷಣೆ ಈ ಜಗತ್ತಿನ ಎರಡೂ ಪರಿಸರವಾದಗಳ ಬಗ್ಗೆ ಸರಿಯಾದ ಚಿತ್ರ ನೀಡುತ್ತದೆ. ಇಂಥಾ ಕೊಳ್ಳೆಗಳಲ್ಲಿ ನಿರತವಾಗಿರುವ ಉತ್ತರಾರ್ಧ ಗೋಲದ ದೇಶಗಳು ಮಾಡಿರುವ ಅವಾಂತರಗಳು ಒಂದೆರಡಲ್ಲ. ತಮ್ಮ ವಿಜ್ಞಾನ, ಸೈನ್ಯ ಬಲಗಳ ಮೂಲಕ ಇವರು ದೋಚಿರುವ ಸಂಪತ್ತು, ಕೊಂದಿರುವ ಜನಸಂಖ್ಯೆಯ ಮೊತ್ತಕ್ಕೆ ಅವರ ಬಳಿಯೇ ದಾಖಲೆಗಳಿಲ್ಲ. ಈ ಜಗತ್ತಿನ ಯಾವುದೇ ಮೂಲೆಯಲ್ಲಿದ್ದರೂ ಸರಿ ಇವರಿಗೆ ಆ ಸಂಪನ್ಮೂಲಗಳು ಬೇಕು. ಭಾರತದ ಹುಲಿ

ಚರ್ಮ, ತೇಗ, ಬಂಗಾರ, ಜೀವ ವೈವಿಧ್ಯ, ಕೊಲ್ಲಿ ರಾಷ್ಟ್ರಗಳ ತೈಲ, ಆಫ್ರಿಕಾದ ಆನೆದಂತ, ಕಿಂಬರ್ಲಿಯ ವಜ್ರಗಳು, ನೈಜೀರಿಯಾದ ಪಕ್ಷಿ ಬಾಪಿಗಳು, ಗ್ವಾಟೆಮಾಲಾದ ಏಲಕ್ಕಿ, ವಿಯೆಟ್ನಾಮಿನ ರಬ್ಬರ್, ಲ್ಯಾಟಿನ್ ಅಮೆರಿಕಾದ ನೈಸರ್ಗಿಕ ಸಂಪತ್ತು ಎಲ್ಲವೂ ಇವರಿಗೇ ಬೇಕು.

ಇದಕ್ಕೆ ಯಾವುದೇ ಪ್ರತಿರೋಧ ಬರಕೂಡದು. ಅದಕ್ಕಾಗಿ ಅವು ಆಯಾ ದೇಶಗಳ ಪ್ರಭುತ್ವಗಳನ್ನೇ ಖರೀದಿ ಮಾಡುತ್ತವೆ. ಕೇಳದಿದ್ದರೆ ಯಾವುದಾದರೊಂದು ನೆಪಹೇಳಿ ಯುದ್ಧ ಹೂಡಿ, ದೇಶವನ್ನು ಧೂಳೀಪಟ ಮಾಡಿ, ಕೊನೆಗೆ ಕೈಗೊಂಬೆ ಸರ್ಕಾರಗಳನ್ನು ಸ್ಥಾಪಿಸುತ್ತವೆ. ಅವುಗಳ ಮಾತನ್ನು ಕೇಳಿದರೆ ದೇಶಗಳು ಸೋಮಾಲಿಯಾ ಆಗುತ್ತವೆ. ಕೇಳದೆ ತಿರುಗಿಬಿದ್ದರೆ ಇರಾಕ್, ಅಫ್ಘಾನಿಸ್ಥಾನಗಳಾಗುತ್ತವೆ. ಅವರ ಕೈಗೊಂಬೆ ಸರ್ಕಾರಗಳಡಿಯಲ್ಲಿ ಪ್ರತಿಭಟನೆ ಕಂಡುಬಂದರೆ ಅಂಥಾ ನಾಯಕರನ್ನು ಕಾಡು ಮೃಗಗಳಂತೆ ಶಿಕಾರಿ ಮಾಡಲಾಗುತ್ತದೆ. ಇದರ ಜ್ವಲಂತ ಉದಾಹರಣೆಗಳೇ ವಿಯಟ್ನಾಮಿನ 'ಹೋ ಚಿ ಮಿನ್', ನೈಜೀರಿಯಾದ 'ಕೆನ್ ಸಾರೊ ವೀವ', ಕ್ಯೂಬಾದ 'ಫಿಡಲ್ ಕ್ಯಾಸ್ಟ್ರೋ', ಲ್ಯಾಟಿನ್ ಅಮೆರಿಕಾದ 'ಚೆ ಗುವಾರ' ಮುಂತಾದವರು.

ಇದು ಶ್ರೀಮಂತ ಪರಿಸರವಾದದ ಮೂಲ. ಇದಕ್ಕೆ ಬಲಿಯಾದ್ದೇ ಬಡವರ ಪರಿಸರವಾದಕ್ಕೆ ಮೂಲ. ಈ "ಉತ್ತರ ಗೋಳೀಯರು" ಗೋಲದ ಉತ್ತರಾರ್ಧಕ್ಕೆ ಮಾತ್ರ ಸೀಮಿತವಾದವರಲ್ಲ ಎಂದು ಮೊದಲೇ ಹೇಳಿದ್ದೇನೆ. ಪ್ರತಿಯೊಂದು ರಾಷ್ಟ್ರದಲ್ಲೂ ಈ ಉತ್ತರ ಗೋಳೀಯರಿದ್ದಾರೆ. ಅವರು ಸಹ ಅಲ್ಲಿಂದಲೇ ಪ್ರೇರಿತವಾದವರು. ಇವರೇ ಈ ದೇಶದಲ್ಲಿ ಪರಿಸರವಾದವೆಂದರೆ ಪ್ರಾಣಿ-ಪಕ್ಷಿಗಳೆಂದು ಹೇಳುತ್ತಾ, ಕೋತಿ, ನಾಯಿ, ಹುಲಿಗಳ ಸಂರಕ್ಷಣೆ, ಸಂಶೋಧನೆಗೆ ಟೊಂಕಕಟ್ಟಿ ನಿಂತಿರುವ ಜನ. ಇವರಿಗೆ ಶಿಕ್ಷಣ, ತರಬೇತಿ ಕೊನೆಗೆ ಹಣ ಬರುವುದು ಕೂಡ ಈ ರಾಷ್ಟ್ರಗಳ ಇಂಥಾ ಕೊಳ್ಳೆ ಹೊಡೆದ ಸಂಪತ್ತಿನಿಂದಲೇ? ಈ ಮೂಲಕ ಪ್ರತಿಯೊಂದು ರಾಷ್ಟ್ರಗಳಲ್ಲೂ ತಮ್ಮ ಪ್ರತಿನಿಧಿತ್ವವನ್ನು ಬೆಳೆಸಿಕೊಳ್ಳುವುದು ಆ ರಾಷ್ಟ್ರಗಳ ಸಂಚು. ಎಲ್ಲೂ ತಮ್ಮ ದರೋಡೆಗೆ ಅಡ್ಡಿಯಾಗದಂತಹ ಸ್ಥಿತಿಯ ನಿರ್ಮಾಣದ ಪೂರ್ವ ಪೀಠಿಕೆಗಳು ಇವು.

ಈ ಅರ್ಥದಲ್ಲಿ ಅಮೆರಿಕಾದ ಪತ್ರಕರ್ತ ವಿಲಿಯಂ ಟುಕರ್ ಹೇಳಿದ ಮಾತುಗಳು ಸತ್ಯವಾಗಿವೆ. ಇದಕ್ಕೆ ಸಂವಾದಿಯಾಗಿ ಆಫ್ರಿಕಾದ ಕವಿಯತ್ರಿ ಬಾರ್ಬರಾ ವನ್‌ಸಕೆಲಾ ಹೇಳುತ್ತಾಳೆ..., "ನಾನು ಮೆದುವಾಗುವೆ, ಆದರೆ ಆರುವುದಿಲ್ಲ. ಪುನಃ ಇಡಿಯಾಗುವೆ, ನೋವಿಲ್ಲದೆ ಅಲ್ಲ, ನಿನ್ನೆಣಿಕೆ ನೀನು ಕ್ಯಾನ್ಸರ್ ಅಂತ, ನಾನು ಬಲ್ಲೆ; ನೀನೊಂದು ಮಡಮೆಗುಳ್ಳೆ."

ಇವಳ ಆಶಾವಾದಕ್ಕೆ ಧ್ವನಿಗೂಡಿಸುವ ಇಚ್ಛಾಶಕ್ತಿ ನಮ್ಮೆಲ್ಲರಿಗೆ ಬರಲಿ.

□

# ಲಲಿತಾ ಸಿದ್ದಬಸವಯ್ಯ : ಐದು ಕವಿತೆಗಳು

## ಹೊಸ ಬದುಕೆಂದರೆ

ದೇವರು ಹೇಳಿದ
ಮಕ್ಕಳೇ, ಪ್ರಳಯವಾಗುವುದು ಖಚಿತ
ನಾನಿಷ್ಟು ಸಹಾಯ ಮಾಡಬಲ್ಲೆ
ನಿಮ್ಮ ಭೂ ಬಟ್ಟಲನ್ನೆತ್ತಿ
ಗಾಳಿ ನೀರಿರುವ ಇನ್ನೊಂದು ಕಾಯದ ಮೇಲೆ ಬೋರಲು ಹೊಯ್ಯುತ್ತೇನೆ
ಅಲ್ಲಿ ನೀವೂ ಉಳಿದು, ಆ ಗ್ರಹವನ್ನೂ ಉಳಿಸಿ

ಅದೇನು ಇಷ್ಟಬಂದಷ್ಟು ವಾಲ್ಯೂಮಿನಲಿ ಕೇಳಿದ ವಾರ್ತೆಯೇ
ದೈವವಾಣಿ, ಏಳು ಖಂಡಗಳಲ್ಲೂ ಮೊರೆದು ಮಿಕ್ಕಿತು
ಎಂತೆಂತಹ ಸೋಮಾರಿಗಳೂ ಎದ್ದರು, ಮೈಮುರಿದರು
ಅಲ್ಲಿ ಬೋರಲು ಬಿದ್ದಾಗ ಹೊದೆಯಲೆಂದು ಕಂಬಳಿ ಸುತ್ತಿಟ್ಟುಕೊಂಡರು.

ದೇವರು ಕೂಗಿದ
ಒಂದು, ಎರಡು, ಮೂರು
ಎಲ್ಲರೂ ಎದ್ದು ನಿಲ್ಲಿ, ನಾನು ಈ ಬೋಗುಣಿಯನ್ನೆತ್ತಿದಾಗ
ತುಳುಕಾಡದಿರಿ; ನಾನು ಈ ಬೋಗುಣಿಯನ್ನು ಮಗುಚಿದಾಗ
ಹೆದರದಿರಿ; ಶುಭವಾಗಲಿ ನಿಮಗೆ ಹೊಸಜಾಗದಲಿ

ಎಲ್ಲಾ ಮುಗಿದು ಹೋಯಿತು ಕಣ್‌ರೆಪ್ಪೆ ತೊಡೆವಷ್ಟರಲ್ಲಿ
ದೇವರೆಂದರ ಸಾಮಾನ್ಯವೇ, ಅವನಿಗಿದೊಂದು ಕಷ್ಟವೇ
ನೀರಿದ್ದ ಕಡೆ ನೆರಳಿದ್ದ ಕಡೆ
ಗುಂಪು ಗುಂಪಾದರು  ನರಮಾನವರು
ಬುತ್ತಿಯ ಬಿಚ್ಚಿ ಉಂಡರು
ಆರತಿ ಎತ್ತಿದರು ಹಾಡು ಹೇಳಿದರು
ಅವರವರ ಕಸುಬಿಗೆ ಅಗತ್ತಾದ ಕಡೆ ಚದುರಿದರು
ಆರು ತಿಂಗಳು ಕಳೆಯಿತು ತಂದ ದಿನಸಿ ಮುಗಿಯಿತು.

ದೇವರು ಕೇಳಿದ
ಮುಂದೇನು ಮಾಡುತ್ತೀರಿ ಹೊಟ್ಟೆಗೆ
ಬೀಜ ತಂದಿದ್ದೀರ ಬಿತ್ತನೆಗೆ

ರೈತ ಹೆಂಡತಿಯನ್ನು ಕೇಳಿದ, ಅವಳು ಸೊಸೆಯನ್ನು
ಸನ್ಯಾಸಿ ಶಿಷ್ಯರನ್ನು, ಗುರು ವಿದ್ಯಾರ್ಥಿಗಳನ್ನು
ಮಾಲೀಕ ಕಾರ್ಮಿಕರನ್ನು, ಮಂತ್ರಿ ಅಧಿಕಾರಿಗಳನ್ನು
ನಾಯಕ ಅನುಯಾಯಿಗಳನ್ನು, ಜಡ್ಜಿ ವಕೀಲರನ್ನು
ವಕೀಲರು ಪೋಲೀಸರನ್ನು, ಪೋಲೀಸರು ಕೈಗೆ ಸಿಕ್ಕವರನ್ನು
ಬಿತ್ತನೆ ಬೀಜ, ಬಿತ್ತನೆ ಬೀಜ, ಬಿತ್ತನೆ ಬೀಜ, ಬಿತ್ತನೆ ಬೀಜ

ದೇವರು ಹೇಳಿದ ಮತ್ತು ಅಂತರ್ಧಾನನಾದ
ಮಣ್ಣು ತಿನ್ನಿ
ಹೊಸ ಬದುಕೆಂದರೆ ಹಳೆಯ ಬೀಜ

## ಲವಾಜಮೆ

ಈ ಓದುಕವರೆ ಪದಾತದ ಮುನ್ನಾದಿನದ ತರದೂದೆಂದರೆ
ಯ್ಯೊ...... ಯ್ಯೊ....... ಯ್ಯೊ........ ಯ್ಯೊ........ ಯ್ಯೊ..........
ಅದ ಈ ಬಾಯಿಂದ ಬಿನ್ನವಿಸಲಾಸವಲ್ಲ ಬಿಡಿ

ಪ್ರಥಮ ಪಾದೇ ಭರತಖಂಡೇ ದಕ್ಷಿಣಾಯನೇ
ಒಂದಾನೊಂದು ಗ್ರಾಮದಲ್ಲೊಬ್ಬಾನೊಬ್ಬ ಗರತಿಯು
ಮುನ್ನಾದಿನೇ ಮುಚ್ಚಂಜೆ ಆಜ್ಞಾಪಿಸುವಳು
'ನಾಕು ಕಡೆ ನೋಡಿ ಸೊಗಡಿರುವ ಕಾಯಿ ತತ್ತನ್ನಿ
ಅಳ್ಳೆಗ್ನೆ ಕೈ ಸವರಿ ಬಿಟ್ಟರೆ ಆಗಿಳಿಸಿದಂಗೆ
ಕಿತ್ತಂಟು ದಿನವಾದ ಕೊಳೆಗಾಯಿಯೂ ಪಿಣಗುಟ್ಟುತ್ತೈತೆ
ದೆಬ್ಬವರೆ ಬೇಡವೇ ಬೇಡ ಬರೇ ಅಬ್ಬರ

ಕಾಯಿ ಕಣ್ಣಿಗಿಂಪುಣವಾಗಿದ್ದರೂ ಬರೇ ಸಿಪ್ಪೆ, ಗೊಬ್ಬರ
ಒಂದು ಕಾಸು ಮುಂದಾದರೂ ಸರಿ
ಕಡ್ಲವರೆ ಆರಿಸಿರಿ, ಕಾಳು ಒದಗುತ್ತೆ
ಅಗಾ, ಆ ಪೂಟ್‌ಲಾಯ್ರಿ ಪಟದಪ್ಪನ ಕೂಡೆ ಮಾತಿಗೆ ನಿಂತು
ದೀಪ ಅಚ್ಚಿದ ಮೇಲೆ ಸಂತೆಗೋದರೆ
ಇಗಾ, ಈಗಲೇ ಏಳಿರುತ್ತೀನಿ
ತಳದಾಗುಳಿದ ಹುಳಕ ಪಳಕ ತಂದಿಲ್ಲಿ ಇಳುವಿದರೆ
ನಾನು ಸುಮ್ಮನಿರುವವಳಲ್ಲ'

೨

ಯಜಮಾನರು ತಂದಿಳಿಸಿದ ಫಲಾವಳಿಯ
ಯಥಾವತ್ತ ಮಾಜರು ನಡೆಸಿ
ಉಂಡು ತೂಕಡಿಸುವ ಹುಡುಗರಿಗೆಲ್ಲ
ಪದಾತದ ರುಚಿವೈಭವ ಕಿರುನಾಲಿಗೆಯವರೆಗೆ ಕೋರೈಸಿ
ಹಿತ್ತಿಲು ತುಂಬಾ ಕಾಯಿ ಸುಲಿಯುವ ಕೋಲಾಹಲ
ಒಂದು ಚಿಪ್ಪೊಳಗೆ ನೀರಿಕ್ಕಿಕೊಳ್ರೋ
ಮುಲಮುಲದ ಹುಳ ತಲೆಕಂಡರೆ ಜಲಸಮಾಧಿ ಮಾಡ್ರೋ
ಬಿಟ್ರೋ ಕೆಟ್ರಿ; ತೆವಳುತ್ತ ತೆವಳುತ್ತ ನೆಟ್ಟಗೆ ಆ ಕಿವಿಯೊಕ್ಕು
ಬುರುಡೆಯೊಳಗೇ ಸುರಂಗ ಮಾರ್ಗ, ಈ ಕಿವಿಯಿಂದ ಪಾರಾಗಿ ಬಿಡುತ್ತದೆ
ಹುಷಾರ್!
ಆಮೇಲೆ ಪತರಗುಟ್ಟಬೇಡಿ

ಸುಲಿದಾಯಿತೋ,
ಹಂಗಂತ ಸುಲಿದಕಾಳೆಲ್ಲ ನೆನೆಹಾಕುವುದೋ
ಹಸಿರುಗಾಳಿದ್ದರೆ ಆರಿಸಿ ಹುಳಿಗೋ ಹುಸುಳಿಗೋ ಎತ್ತಿಕ್ಕಿ
ಸಮಬಲಿತ ಬಿಳೀಕಾಳಿಗೆ ಹಿಡಿಬೆಚ್ಚಗಿನ ನೀರುಣಿಸಿ
ಅಲ್ಲಿಗೆ ಒಂದು ಹಂತಕ್ಕೆ ಬಂದು
ಸಿಪ್ಪೆಮಂಕರಿಯನ್ನು ಗ್ವಾಂದಿಗೆಯ ಎಮ್ಮೆ ಬಾಯಿಗಿಕ್ಕಿ
ಒಂದು ಗಳಿಗೆ ಉರುಳಿಕೊಳ್ಳಿ

೩

ಕೋಳಿ ಕೂಗಿತೋ, ತಗೋ ಸುರುವಾಯಿತು ಕಾಳು ಹಿದುಗುವ
ಒಸಗೆಮನೆ ಗದ್ದಲ
ನೆನೆದು ಪುತಪುತ ಪುಟ್ಟಗೆ ಹೊಟ್ಟೆಯುಬ್ಬಿಸಿಕೊಂಡ
ಒಂದೊಂದೇ ಕಾಳು ಹೆಬ್ಬೆರಳ ತಿರುಪಿಗೆ ಸಿಕ್ಕಿ

ಫ್ರಕ್..... ಫ್ರಕ್... ವಸ್ತ್ರಾಪಹರಣ
ನಸುಹಸಿರಿನ ತೆಳು ಸೀರೆಯ ಸೆಳೆದ
ದುಶ್ಯಾಸನ ಬೆರಳು ಚಕಚಕನೆ ಕ್ರಿಯಾಶೀಲಗೊಂಡು
ಬೋಗುಣಿ ತುಂಬಾ
ಮೆದು ಮೆದು ಹಿದುಕವರೆ
ಆಗ ತಾನೇ ಡ್ಯೂಟಿಗೆ ಬಂದ ಸೂರ್ಯನಾರಾಯಣನ
ಲಾಠೀ ಛಾರ್ಜಿಗೆ ಥಳಕ್ಕೆಂದು ಫುಟನೆಗೆಯುವ ಬೇಳೆ

೪

ಈ ಹಿದುಕವರೆ ಪದಾತದ ಲವಾಜಮೆ ಸುಲಭದ್ದಲ್ರೀ
ಸುರಿತ ಕೈಯಲ್ಲೇ ಎರಡೆರಡು ಸರ್ತಿ ಕೂಡಿಸಬೇಕು
ವಿಧ ವಿಧ ಮಸಾಲೆ
ಮೊದಲು ಹುರಿದಷ್ಟು, ತದನಂತರ ಹಸೀ ಸೌಕರಣೆ
ಧನಿಯ, ಜೀರಿಗೆ, ಬಳ್ಳಾಪುರದ ಮೆಣಸಿನಕಾಯಿ
(ಬ್ಯಾಡಗಿ ಗೀಡಗಿ ಹಾಕಿದಿರೋ ಬರೀ ಬಣ್ಣದ ಬಡಾಯಿ)
ಬೆಂಬೂದಿಯಲಿ ಸುಟ್ಟ ಉಳ್ಳಾಗಡ್ಡೆ
ಬೇಕಿದ್ದವರೆರಡಿಲುಕು ಬೆಳ್ಳುಳ್ಳಿ
ಒಂದು ಒಳಹಿಡಿ ಬೆಂದಕಾಳು
ಒರಳಿಗೆ ತಳ್ಳಿ, ಇಷ್ಟೂ ತರಿ ಇರದಂತೆ ಗುಂಡಾಡಿಸಿ ಬೇಳೆಗೆ ಬೆರೆಸಿ
ಮನೆಬೆಣ್ಣೆ, ಸಾಸುವೆ, ಕರಿಬೇವುಗಳ
ಒಡ್ಡೋಲಗದ ನಡುವೆ ಹಿದುಕಿದ ಕಾಳು ಸುಖವಾಗಿ ಮಗ್ನವಾಗ
ಕೇರಿ ತುಂಬಾ ಘಮ ಘಮ ಘಮಲು
ಇವರ ಮನೆಯಲ್ಲಿಂದು ಹಿದುಕವರೆ ಪದಾತ, ಹಿದುಕವರೆ ಪದಾತ
ತಮ್ಮಟೆಯಿಲ್ಲದ ಹುಯ್ಲು
ಎರಡನೇ ಕೂಡಿಕೆಗೆ ಹಸಿ ತೆಂಗು ಗಸಗಸೆಯ ವರೋಪಚಾರ
ಆಹಾ! ಸಿದ್ಧವಾಯಿತೋ ಲೊಟಗೆ ಹೊಡೆಯುತ್ತ ಚಪ್ಪರಿಸುವ
ಹಿದುಕವರೆ ಆಮ್ರ

೫

ಇಷ್ಟೆಲ್ಲ ಕ್ರಮ ಕೈಗೊಂಡರೂ
ಒಂದೊಂದು ಸಾರಿ ಪದಾತವೆಂಬುದು ಕೆಟ್ಟು ಕೇರು
ರೇಗುವುದು ಯಾರ ಮೇಲೆ
ಎಡವಿದ್ದು ಯಾವ ಮೆಟ್ಟಿಲ ಮೇಲೆ
ಪದ್ಯ ಬರೆಯುವಾಗಲೂ ಅಷ್ಟೇ, ಇದೇ ಅನುವರಲು!

## ಧನ್ಯವಾದಗಳು

ದೇವರೇ
ನಾವು ನಿನ್ನನ್ನು ಅನುವಾದಿಸುತ್ತಿದ್ದೇವೆ
ಕ್ಷಣಕ್ಷಣವೂ ನೀನು ಅನುವಾದಗೊಳ್ಳುತ್ತೀಯ
ಭೂಮಂಡಲದ ಮೇಲಿರುವ ಅಷ್ಟೂ ಭಾಷೆಗಳಲ್ಲಿ
ಏಕಕಾಲಕ್ಕೆ ಎಲ್ಲೆಡೆಯಲ್ಲಿ
ಎಲ್ಲ ತಾಯಂದಿರ ಅಪ್ರಕಟಿತ ಸಾಹಿತ್ಯದಲ್ಲಿ

ದೇವರೇ,
ನಮಗೆ ಗೊತ್ತಿಲ್ಲ ಇದರ ಲಿಪಿ
ನಮ್ಮ ಅಂಗೈಗಳ ನೇವರಿಕೆಯಲ್ಲಿ
ನಮ್ಮ ತೋಳುಗಳ ಬಿಗಿ ಮಡಿಕೆಯಲ್ಲಿ
ನಮ್ಮ ತೊಡೆಗಳು ರಚಿಸುವ ತೊಟ್ಟಿಲ ತಗ್ಗಿನಲ್ಲಿ
ನಮ್ಮ ಹಾಲುದುಂಬಿದ ಮೊಲೆಗಳಲ್ಲಿ
ಅದಕ್ಕೂ ಮೊದಲು ಮಾಂಸಮಜ್ಜೆಯ ಗರ್ಭಚೀಲದಲ್ಲಿ
ನಾವು ನಿನ್ನನ್ನು ಅನುವಾದಿಸುತ್ತಿರುತ್ತೇವೆ
ಮೂಲಕ್ಕೆ ಸದಾ ಸನಿಹವಾಗಿ
ನಿನ್ನ ಆಶಯಗಳಿಗೆ ಸದಾ ಬದ್ಧರಾಗಿ

ದೇವರೇ
ನಮ್ಮನ್ನು ಆಶೆಬುರುಕಿಗಳಾಗಿಸದಿರು
ಆಕರಕೆ ಅಪಚಾರವೆಸಗದಂತೆಮ್ಮ ಎಚ್ಚರಿಸುತಿರು
ಈ ಅನುವಾದಕ್ಕೆ ನಾವು ರುಸುಮು ಬೇಡದಂತಿರಲಿ
ಎಲ್ಲ ಹಕ್ಕುಗಳೂ ನಿನ್ನ ಸೌಜನ್ಯದಲ್ಲೇ ಇರಲಿ

ದೇವರೇ
ಧನ್ಯವಾದಗಳು
ನಮ್ಮನ್ನು ಮಾತ್ರ ನಿನ್ನ ಅನುವಾದಕರಾಗಿ
ಆಯ್ದುಕೊಂಡಿದ್ದಕ್ಕೆ!

## ಗುಟ್ಟೆ ಅಯ್ಯ

ಬಂದಿರಾ,
ಬನ್ನಿಬನ್ನಿ ಬೇಗಿತ್ತ ನೆರಳಿಗೆ ಬನ್ನಿ
ಬಯಲು ಸೀಮೆಯ ಬಿಸಿಲು
ಕೆಂಡಮಳೆ ನೆತ್ತಿಯಲಿ ಕೆಳಗಗ್ನಿಗೊಂಡ

ಅಗೋ ಅಲ್ಲಿದೆ ನೋಡಿ
ತೊಳೆದ ಗಡಿಗೆಯಲಿ ಕುಡಿವ ಸೀನೀರು
ಹುಗಿದ ಬಾನಿಯಲಿ ಜಳಕದುದುಕ
ಇಷ್ಟು ತಂಪಾಗಿ ಬಿಡಿ, ಉಂಡುಬಿಡುವಿರಂತೆ

ವಿಶೇಷವೇನಿಲ್ಲ
ಗುಟ್ಟೆಅಯ್ಯನ ಗಣಸೇವೆ ಇವೊತ್ತು
ಒಕ್ಕಲಿನಿಂದಿಪ್ಪತ್ತು ಊರವರು
ತಲೆಗಿಷ್ಟು ಹಂಚಿಕೊಂಡು ನಡೆಸುತ್ತೇವೆ

ಮಠವೇ
ಇಲ್ಲಿಲ್ಲ, ಗುಟ್ಟಯ್ಯ ಮಠ ಕಟ್ಟಲಿಲ್ಲ
ಈ ಕಲ್ಲು ಗುಟ್ಟೆಗೆ ಅವ ಬಂದಾಗ ಒಂಟಿಯಂತೆ
ಅವಕೂ ಹಿಂದಿನವ ಹಳಬರು ಹೇಳಿಲ್ಲ ಹೊಸಬರು ತಿಳಿದಿಲ್ಲ

ಪವಾಡವೇ
ಅಂಥದ್ದೇನೂ ಲಾಗಾಯ್ತನಿಂದ ಕಂಡಿಲ್ಲ ಸ್ವಾಮೀ
ಜನರ ಜೊತೆ ಗುಟ್ಟಯ್ಯ ಕಲೆತದ್ದೆ ಕಮ್ಮಿ
ಗುಡಿ, ಗಂಟೆ, ಆರುತಿ, ಪಾರುತಿ, ಇಲ್ಲ ಬಿಡಿ, ಇಲ್ಲ ಬಿಡಿ

ಏನು ಮಾಡಿದನೇ
ಎರಡು ಬಾವಿ ತೋಡಿದ ದೇವರು
ನೀವೀಗ ಬಂದ ಬೆಣಚು ಕಲ್ಲಿನ ಓಣಿಯೆಡಗಡೆಗೆ
ಇಪ್ಪದ್ದು ಅದೇ ಗಂಗವ್ವ, ಇತ್ತ ಬಲಕ್ಕೆ ತುಂಗವ್ವ

ಸುತ್ತೂರಿಗೆಲ್ಲ
ಇದೇ ಕೂಡುಹಾದಿ ಬಿಟ್ಟರಿನ್ನೊಂದಿಲ್ಲ
ಮಕ್ಕಳು - ಮರಿ, ದನ-ಕರ, ಕೂಲಿ-ನಾಲಿ, ಅಂಗಡಿ-ಮುಂಗಟ್ಟು
ಸರ್ವಸ್ವವೂ ಸುಳಿದಾಡಬೇಕು, ಎಲ್ಲಕೂ ಇಲ್ಲೆ ಬೆಳಕರಿಯಬೇಕು

ನೂರಜುಗಲ್ಲಿನ ಭೂಮಿ
ಗಂಟಲೊಣಗಿದರೂ ಬೊಗಸೆ ನೀರಿಲ್ಲ
ಮನೆಯೇ, ಹೊಲವೇ, ಅಂಗೈಯಗಲದ ನೆರಳೇ
ಅವರುಸಿರೆ ಬೀಸಣಿಗೆ, ಬಿಸಲೆ ರಸಬಾಳೆ

ಇಂಥ ಬೇಸಿಗೆಯಲ್ಲೊಂದು ದಿನ
ಗುಟ್ಟೆಯಿಂದಿಳಿದಯ್ಯ ರಟ್ಟೆಯೊಂದನೆ ನೆಚ್ಚಿ

ಅಂಗೈಯ್ಯೆ ಗುದ್ದಲಿಯಾಗಿ ತೋಳು ತೊಡೆ ಹಾರೆಗೋಲಾಗಿ
ಒಬ್ಬನೇ ನಾಲ್ಕಾಳಾಗಿ ಬೆವರೇ ಬುತ್ತಿಯಾಗಿ

ತೆರೆದನೋ ಜಲದ ಕಣ್ಣ
ಹುಟ್ಟು ಹುಳುವಿಗೂ ಬೇಕಾದ ಹೊಟ್ಟೆ ಬೆಳಕನ್ನ
ಗಂಗವ್ವನೆಂಬುದು ಅವನಿಟ್ಟ ಹೆಸರು ಕೊಂಚ ಚೌಳು
ಮುನ್ನ ತೋಡಿದ ತುಂಗವ್ವನೆದೆ ತುಂಬ ಬೆಲ್ಲದಂಥಾ ನೀರು

ವರುಷವೆಷ್ಟಾಯಿತೋ
ನೀರಸೆಲೆ ಸೊರಗಿಲ್ಲ ಬಾವಿ ತಳ ಕಂಡವರಿಲ್ಲ
ನಡೆದು ಹೋದವರ ವಿವರ ಹಾದಿ ಕೇಳುವುದಿಲ್ಲ
ಕುಮಿದು ತಣಿದವನ ಪ್ರವರ ಜಲಕೆ ಬೇಕಿಲ್ಲ.

**ಬಿಡತೂನ್ನಿ**

ಮುಗಿಯಿತು ಕಣೇ ರಾಹುಗಾಲ
ಬಂದು ಬಿಡುವರು ಇನ್ನೇನು ಗಂಡಿನವರು
ಇದ ಅಲ್ಲಿಡು, ಅದ ಎತ್ತಿಡು, ಬ್ಬೇಬ್ಬೇಗ ಕೈಯಾಡು

ಬರಲಿ ಬಿಡಿ ಬೇಕಾದ್ದು ಸಿದ್ಧವಿದೆ
ಬಾಯಿ ಗಡಿಬಿಡಿ ಮಾಡಿ ಕೆಲಸ ಕೆಡಿಸಬೇಡಿ
ಕೈ ಕಾಲಿಗೆ ತೊಡರದೆ ನೀವೊಂದು ಕಡೆ ದೇವರಾಗಿ ಕೂಡಿ

ಎಣ್ಣೆ ಬಿಡು ಕಂಠದವರೆಗೆ
ಅವರು ಬಂದಾಗ ದೇವರ ದೀಪ ಬೆಳಗುತ್ತಿರಲಿ
ಅಡುಗೆ ಸಣ್ಣುರಿಯ ಮೇಲಿಡು, ಎಲ್ಲವೂ ಬಿಸಿಯಾಗಿರಲಿ

ನೀವೊಂದು, ಸುಮ್ಮನಿರಿ ಸ್ವಲ್ಪ
ಇದನ್ನೆಲ್ಲ ನೀವು ಹೇಳಿಕೊಡಬೇಕೆ ಹೆಂಗಸರಿಗೆ
ಅಡುಗೆ ಮನೆಯವರೆಗೂ ನಿಮ್ಮ ಪಾದ ಅಷ್ಟುದ್ದ ಬೆಳೆವುದೇಕೆ

ಹಾಂ,ಹಾಂ, ನನ್ನ ಬಾಯಿ ಬಡಿಯಬೇಡ
ಹೋದಸಾರಿ ಬಂದವರೆದುರು ಆದದ್ದು ಕಡಿಮೆ ಅನಾಹುತವೇ
ಕೇಸರಿ ಬಾತಿಗೆ ಸಕ್ಕರೆ, ಉಪ್ಪಿಟ್ಟಿಗೆ ಉಪ್ಪು ಎರಡೇ ನೀನು ಮರೆತಿಪ್ಪಲ್ಲವೇ

ಅಯ್ಯೋ ಕೊಳ್ಳಿ ಹೋದದ್ದೇನು ಬಿಡಿ
ಶುಭವಾಗಿ ಕುಚ್ಚು ಹೂ ತರದೆ ಬಂದ ಕಾಗೆ ಬೀಗರಿಗೆ
ಕೊಡಬಹುದೇ ನಮ್ಮ ಹುಡಗಿಯನು ಆ ಜೀನ ಜುಗ್ಗರಿಗೆ

ಹೆಸರಿಡುತ್ತಿರಿ ಹೀಗೆ ಬಂದವರಿಗೆ
ತಾಯಿ ಮಕ್ಕಳು ನೀವು ಸಾಮಾನ್ಯದವರೇನಲ್ಲ
ಗಾಳ ಹಾಕುತ್ತಾ ಕೂರಲು ಇಲ್ಲಿ ಬಿಟ್ಟಿ ನಾನಿದ್ದೇನಲ್ಲ

ಗಾಳಕ್ಕೆ ಸತ್ತ ಹುಳು ಸಿಗಿಸಿದರೆ ಬಂತೆ
ಕಾಲ ಬದಲಾಗಿದೆ ಫರಾವರಿ ಮೀನು ತಿಂಡಿ ಬಂದಿದೆ ಮಾರ್ಕೆಟ್ಟಿಗೆ
ಫಕ್ಕನೆ ಕಚ್ಚುವಂಥದ್ದೇನಾದರೂ ಇದ್ದರೆ ಸಿಕ್ಕೀತು ಒಳ್ಳೆಮನೆ ಹುಡುಗಿಗೆ

ಹೂಂ ಕೊಟ್ಟಿಟ್ಟಿದ್ದಾನೆ ನಿಮ್ಮಪ್ಪ
ಫರಾವರಿ ಸಿರಿದಿಂಡಿ, ಬಾಯಿದಂಬುಲ, ಕೊಪ್ಪರಿಗೆ ಬೆಲ್ಲ
ನಾನು ಬಿಪ್ಪ ಬೋನಿನೊಳಗೆ ಮುಗ್ಗಿದ ಕೊಬ್ಬರಿ ಚೂರಿಗೂ ಗತಿಯಿರಲಿಲ್ಲ

ನಮ್ಮಪ್ಪನ ವಿಷಯ ಎತ್ತಿದರೆ ಹುಷಾರ್
ಹೆಣ್ಣು ಕೊಟ್ಟಿದ್ದೇ ಹೆಚ್ಚು ನಿಮ್ಮಂಥ ಬಯಲಾಂಜನೇಯನಿಗೆ
ಎರಡು ಗಂಗಳ, ಒಂದು ತಂಬಿಗೆ, ದಿಕ್ಕಿರಲಿಲ್ಲ ಮೇಲೊಂದುದ್ಧರಣೆಗೆ

ಅಲ್ಲವೇ ಮತ್ತೆ ನೀನು ಭಾರೀ ಭೂಲೋಕ ರಂಭೆ
ಹೌದು ಕಣೇ, ನಾವು ತಿರುಬೋಕಿಗಳು, ತಿರುಪೆ ದಾಸಯ್ಯಗಳು
ನಿಮ್ಮಪ್ಪ ದೀವಾನ, ಬೆಲ್ಲದ ಹರುಪಿ ಬೀದಿಲಿಟ್ಟು ದಾನ ಮಾಡಿದ ಕರ್ಣ

ಕರ್ಣನಾದುದಕೇ ಅಂಥಾ ಒಳ್ಳೆ ಸಾವು ಸತ್ತ
ತಿಳುಕೊಳ್ಳೇ, ಈ ಸುಖಕ್ಕೆ ನನ್ನಿಲ್ಲಿಗೆ ತಳ್ಳಿ ಹೋದ
ಕರಿಮಣಿ ಮಗ್ಗುಲಿಗೊಂದು ಬಿಳಿಮಣಿ ಕಾಣಲಿಲ್ಲ ಮದುವೆಯಾದಾಗಿನಿಂದ

ಅಳಬೇಡವೇ ಲೋಪಾಮುದ್ರೆ
ಈಗೇನು ಮಗಳ ಮದುವೆ ನಿಲ್ಲಿಸಿ ನಿನಗೇ ಸಂಬಂಧ ಹುಡುಕಲೇನು
ದೊಡ್ಡ ಮನೆಸೇರಿ ಇಟ್ಟು ತೊಟ್ಟು ಮೆರೆದಾಡಿ ಆಸೆ ತೀರಿಸಿಕೋ ನೀನು

ಛೀ ಬಿಡತೂನ್ನಿ, ಮಕ್ಕಳ ಮುಂದೆ
ಬಂದೇ ಬಿಟ್ಟರು ಗಂಡಿನವರು ಮೆಲ್ಲಗೆ ಮಾತಾಡಿ
ಇಗೋ ಕಣ್ಣೊರಸಿಕೊಂಡು ನಾನೂ ಬಂದೆ, ಬಾಗಿಲಿಗೆ ಹೋಗಿ ಬರಮಾಡಿಕೊಳ್ಳಿ

□

ಶ್ರೀಮತಿ ಲಲಿತಾ ಸಿದ್ಧಬಸವಯ್ಯ, ಚಿನ್ಮಯಿ ಪ್ರಕಾಶನ, ೫೨೧೭, ಗುರುಸನ್ನಿಧಿ, ೨ನೇ ತಿರುವು
ಅಶೋಕ ನಗರ, ತುಮಕೂರು -೫೭೨ ೧೦೨

# ಕಾರ್ನಾಡರ ತುಘಲಕ್ : ಮರುಚಿಂತನೆ

ಡಾ. ಬಸವರಾಜ ಸಬರದ

ಆಧುನಿಕ ರಂಗಭೂಮಿಯ ಸಂದರ್ಭದಲ್ಲಿ ಗಿರೀಶ ಕಾರ್ನಾಡರ "ತುಘಲಕ್" ಹೆಚ್ಚು ಚರ್ಚೆಗೊಳಗಾದ ನಾಟಕವಾಗಿದೆ. ಕಾರ್ನಾಡರು ನವ್ಯ ಲೇಖಕರಾಗಿರುವುದರಿಂದ ಅನೇಕ ವಿಮರ್ಶಕರು ಈ ನಾಟಕವನ್ನು ಅಸ್ತಿತ್ವವಾದದ ಹಿನ್ನೆಲೆಯಲ್ಲಿಯೇ ಚರ್ಚಿಸಿದ್ದಾರೆ. ಪುರಾಣ-ಇತಿಹಾಸಗಳನ್ನು ಮುರಿದು ಕಟ್ಟುವ ಕಾರ್ಯ ಸೃಜನಶೀಲ ಸಾಹಿತ್ಯದಲ್ಲಿ ಮೊದಲಿನಿಂದಲೂ ನಡೆದುಕೊಂಡು ಬಂದಿದೆ. ಅಂತಹ ಪರಂಪರೆಗೆ ಕಾರ್ನಾಡರ ಕೊಡುಗೆ ವಿನೂತನವಾಗಿದೆ.

ತುಘಲಕ್ ಐತಿಹಾಸಿಕ ವ್ಯಕ್ತಿ. ಹದಿನಾಲ್ಕನೇ ಶತಮಾನದಲ್ಲಿ ದಿಲ್ಲಿ ಸಾಮ್ರಾಜ್ಯವನ್ನಾಳಿದ ದೊರೆ. ಆತನ ಸಾಧನೆಗಳನ್ನು ಐತಿಹಾಸಿಕ ಆಧಾರಗಳ ಮೂಲಕ ಗುರುತಿಸಿ ಬರೆದಿದ್ದರೆ, ಇದೊಂದು ಸಾಮಾನ್ಯವಾದ ಐತಿಹಾಸಿಕ ನಾಟಕವಾಗುತ್ತಿತ್ತು. ಆದರೆ ಕಾರ್ನಾಡರು ಇಲ್ಲಿ ಕೇವಲ ಇತಿಹಾಸವನ್ನು ಹೇಳುವುದಿಲ್ಲ, ವರ್ತಮಾನದ ಮೂಲಕ ಇತಿಹಾಸವನ್ನು ಒಡೆಯುತ್ತ ಹೋಗುತ್ತಾರೆ. ಆಗ ಇತಿಹಾಸ, ವರ್ತಮಾನವಾಗುತ್ತದೆ; ವರ್ತಮಾನಕ್ಕೆ ಐತಿಹಾಸಿಕ-ಗಾಂಭೀರ್ಯ ಬರುತ್ತದೆ. ಇದು ಕಾರ್ನಾಡರ ವೈಶಿಷ್ಟ್ಯತೆಯಾಗಿದೆ.

ತುಘಲಕ್ ಒಬ್ಬ ಮುಸ್ಲೀಂ ಸುಲ್ತಾನ್. ಆತ ತನ್ನ ಆಳ್ವಿಕೆಯಲ್ಲಿ ಹಿಂದೂ ಪ್ರಜೆಗಳನ್ನೊಲಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಹಿಂದೂ ಹೆಣ್ಣುಮಕ್ಕಳ ಮೇಲಿದ್ದ ಪೆರಿಗೆ ತೆರಿಗೆಯನ್ನು ತೆಗೆದುಹಾಕುತ್ತಾನೆ. ಹಿಂದೂಗಳೇ ಹೆಚ್ಚಾಗಿರುವ ದೌಲತ್ತಾಬಾದಿಗೆ ತನ್ನ ರಾಜಧಾನಿಯನ್ನು ವರ್ಗಾಯಿಸುತ್ತಾನೆ. ಹೀಗೆ ತಾನು ಹಿಂದೂಪರವೆಂದು ಗುರುತಿಸಿಕೊಳ್ಳಲು ಮಾಡಿದ ಪ್ರಯತ್ನಗಳೆಲ್ಲಾ ವ್ಯರ್ಥವಾಗುತ್ತವೆ. ಇನ್ನು ಇಸ್ಲಾಂ ಧರ್ಮದ ದುರಂಧರನೆನಿಸಿಕೊಳ್ಳಲು, ದಿಲ್ಲಿಯ ಬೀದಿ ಬೀದಿಯಲ್ಲಿ

ಕುರಾನ್ ಓದುವ ಪರಿಪಾಠ ಪ್ರಾರಂಭವಾಗುತ್ತದೆ. ಪ್ರಜೆಗಳ ಸಮ್ಮುಖದಲ್ಲಿ ಶೇಖ ಇಮಾಮುದ್ದೀನರಂತಹ ಧರ್ಮಗುರುಗಳನ್ನು ಪೂಜ್ಯತೆಯಿಂದ ಗೌರವಿಸುತ್ತಾನೆ. ಅವರು ನೀಡುವ ನ್ಯಾಯತೀರ್ಪಿಗೆ ಬದ್ಧನಾಗುತ್ತಾನೆ. ಆದರೂ ಮುಸ್ಲೀಂ ಪ್ರಜೆಗಳು ಈತನ ಆಡಳಿತವನ್ನು ಸಹಿಸಿಕೊಳ್ಳುವುದಿಲ್ಲ.

ಇಲ್ಲಿ ತುಘಲಕ್ ಹಿಂದೂ-ಮುಸ್ಲೀಂ ಎರಡೂ ಗುಂಪಿನ ಸಮುದಾಯದ ಪ್ರೀತಿಗೆ ಪಾತ್ರವಾಗದೇ ಹೋಗುತ್ತಾನೆ. ಕೇವಲ ಧಾರ್ಮಿಕ ಭಾವನೆಗಳ ಮೂಲಕ ಜನತೆಯನ್ನು ತೃಪ್ತಿಪಡಿಸುವುದಕ್ಕಾಗುವು ದಿಲ್ಲವೆಂಬ ಸತ್ಯವನ್ನು ಈ ನಾಟಕ ಸ್ಪಷ್ಟಪಡಿಸುತ್ತದೆ. ಹಸಿವು, ಬಡತನ, ನಿರುದ್ಯೋಗದಂತಹ ಸಮಸ್ಯೆಗಳನ್ನು ಬಗೆಹರಿಸದೆ ಕೇವಲ ಧಾರ್ಮಿಕ-ಆಚರಣೆಗಳಿಗೆ ಮಾತ್ರ ಮಹತ್ವ ಕೊಟ್ಟರೆ ಜನ ಸ್ವೀಕರಿಸಲಾರರೆಂಬುದನ್ನು ಇತಿಹಾಸ ಸ್ಪಷ್ಟಪಡಿಸಿದೆ. ಅಂತೆಯೇ ಈ ನಾಟಕದ ಮೊದಲನೇ ದೃಶ್ಯದಲ್ಲಿ ಪ್ರಸ್ತಾಪವಾಗಿರುವ "ಕುರಾನ್ ಓದಿದರೆ ಆಗಲಿಲ್ಲ, ಅದರಂತೆ ನಡೆದರೆ ಮಾತ್ರ ಧರ್ಮ" ಎಂಬ ಮುದುಕನ ಮಾತಿನಲ್ಲಿರುವ ಸತ್ಯ ಸ್ಪಷ್ಟವಾಗಿ ಅಭಿವ್ಯಕ್ತಗೊಂಡಿದೆ. ತುಘಲಕ್‌ನ ರಾಜ್ಯದಲ್ಲಿ ಹಸಿವೆಯಿಂದ ಜನ ಸಾಯುತ್ತ ಹೋಗುತ್ತಾರೆ; ಕೊಲೆ-ಕಳ್ಳತನಗಳು ಹೆಚ್ಚಾಗುತ್ತವೆ; ಇಡೀ ಸಾಮ್ರಾಜ್ಯ ಆರ್ಥಿಕವಾಗಿ ದಿವಾಳಿಯಾಗಿ ಬಿಟ್ಟಿದೆ; ಮಾನಸಿಕವಾಗಿ ಕ್ಷೋಭೆಗೊಂಡಿದೆ. ಎಲ್ಲ ಪ್ರಜೆಗಳ ಮುಖದಲ್ಲಿಯೂ ಹತಾಶೆ ಎದ್ದು ಕಾಣುತ್ತದೆ. ಆಯಿನೇ ಉಲ್ಮುಲ್ಕಾನಂತಹ ನೆರೆ ರಾಜ್ಯಗಳ ಸುಲ್ತಾನರು ದಿಲ್ಲಿಯ ಮೇಲೆ ದಂಡೆತ್ತಿ ಬರುವ ಸಂಚು ನಡೆಸಿದ್ದಾರೆ. ಇದನ್ನೆಲ್ಲ ತಪ್ಪಿಸಿಕೊಳ್ಳಲು ತುಘಲಕ್ ರಾಜಧಾನಿಯನ್ನು ದಿಲ್ಲಿಯಿಂದ ದೌಲತ್ತಾಬಾದಿಗೆ ವರ್ಗಾಯಿಸುತ್ತಾನೆಯೇ ಹೊರತು ದೌಲತ್ತಾಬಾದದಲ್ಲಿರುವ ಹಿಂದೂಗಳ ಒಳಿತಿಗಲ್ಲವೆಂಬ ಸತ್ಯ ಸ್ಪಷ್ಟವಾಗುತ್ತದೆ. ಆದರೆ ಇಂತಹ ರಾಜಕೀಯ ತಂತ್ರಗಳು ಬಹಳ ದಿನ ಮುಂದುವರೆಯಲಾರವೆಂಬುದನ್ನೂ ನಾಟಕ ಸೂಚಿಸುತ್ತದೆ.

"ಧರ್ಮ ಮತ್ತು ರಾಜಕಾರಣ"-ವಿಷಯವನ್ನು ಮುಂದಿಟ್ಟುಕೊಂಡು ನೋಡಿದರೆ ಈ ನಾಟಕ ಹಿಂದೆಂದಿಗಿಂತಲೂ ಇಂದು ಹೆಚ್ಚು ಪ್ರಸ್ತುತವೆನಿಸುತ್ತದೆ. ರಾಮಜನ್ಮಭೂಮಿ-ಬಾಬರಿ ಮಸೀದಿ ಪ್ರಕರಣವನ್ನು ಇಲ್ಲಿ ಮುಖ್ಯವಾಗಿ ಉದಾಹರಿಸಬಹುದಾಗಿದೆ. ರಾಮನ ಹೆಸರಿನಲ್ಲಿ ಅಯೋಧ್ಯೆಯ ಬಾಬರಿ ಮಸೀದಿಯನ್ನು ಕೆಡವಿಹಾಕಿ ರಥಯಾತ್ರೆಗಳನ್ನು ನಡೆಸಿದ ರಾಜಕೀಯ ಪಕ್ಷಗಳಿಗೆ ಈಗಾಗಲೆ ಜನರು ಪಾಠ ಕಲಿಸಿದ್ದಾರೆ.

ಜನಸಾಮಾನ್ಯರಲ್ಲಿ ಧಾರ್ಮಿಕ ಭಾವನೆಗಳನ್ನು ಕೆರಳಿಸಿ, ಆ ಮೂಲಕ ಅಧಿಕಾರಕ್ಕೆ ಬಂದು ಬಹಳ ದಿನ ಆಳಲಿಕ್ಕಾಗುವುದಿಲ್ಲವೆಂಬ ಸತ್ಯವನ್ನು ಇತ್ತೀಚಿಗೆ ನಡೆದ ನಮ್ಮ ಚುನಾವಣೆಗಳು ಸಾಬೀತುಪಡಿಸಿವೆ. ಇದೆಲ್ಲವನ್ನು ಗಮನಿಸಿದಾಗ ತುಘಲಕ್ ಕೇವಲ ಹದಿನಾಲ್ಕನೇ ಶತಮಾನದವನಾಗಿ ಮಾತ್ರ ಕಾಣುವುದಿಲ್ಲ, ಇಂದಿನ ರಾಜಕೀಯ ನಾಯಕರ ಮೂಲಕ ಆತ ಜೀವಂತವಾಗಿದ್ದಾನೆ. ಅಧಿಕಾರದ ಲಾಲಸೆ ಎಂತಹದೆಂಬುದನ್ನು ತಿಳಿದುಕೊಳ್ಳಲು ತುಘಲಕ್ ಜೀವಂತ ಉದಾಹರಣೆಯಾಗಿದ್ದಾನೆ. ತನ್ನ ತಂದೆಯನ್ನೇ ಕೊಲ್ಲಿಸಿದ ಆರೋಪ ತುಘಲಕ್‌ನ ಮೇಲಿದೆ. ತಾನು ಗೌರವ ತೋರಿಸುತ್ತಿದ್ದ ಧರ್ಮಗುರು ಶೇಖ ಇಮಾಮುದ್ದೀನನನ್ನು ತುಘಲಕ್ ಕೊಲ್ಲಿಸುತ್ತಾನೆ. ಶಿಹಾಬುದ್ದೀನನನ್ನು ಸ್ವತಃ ಕೊಲ್ಲುತ್ತಾನೆ. ತನ್ನ ಮಲತಾಯಿಯನ್ನು ವಿನಾಕಾರಣ ಚಿತ್ರಹಿಂಸೆಗೊಳಪಡಿಸಿ ಸಾಯಿಸುತ್ತಾನೆ. ಹಿಂಸೆ-ದೌರ್ಜನ್ಯ-ಕೊಲೆ ಪ್ರಸಂಗಗಳು ತುಘಲಕ್‌ನ ಆಳ್ವಿಕೆಯಲ್ಲಿ ಸರ್ವೆಸಾಮಾನ್ಯವೆನ್ನುವಂತಾಗಿವೆ.

ಅಧಿಕಾರದಾಸೆ ತೀವ್ರಗೊಳ್ಳುತ್ತಿರುವ ಇಂದಿನ ರಾಜಕೀಯ ವ್ಯವಸ್ಥೆಯಲ್ಲಿ, ನೀತಿ-ಆದರ್ಶಗಳನ್ನು ಗಾಳಿಗೆ ತೂರಿ ಕುರ್ಚಿ ಹಿಡಿಯುವುದೊಂದೇ ಮುಖ್ಯವಾಗಿರುವ ಈ ವರ್ತಮಾನದಲ್ಲಿ ತುಘಲಕ್ ನಾಟಕ ಸಮಕಾಲೀನ ಸಂದರ್ಭದ ಕನ್ನಡಿಯಂತೆ ಕಾಣಿಸುತ್ತದೆ. ಅಧಿಕಾರದ ದಾಹ-ಸ್ವಾರ್ಥದಂತಹ ವಿಷಯದಲ್ಲಿ ತುಘಲಕ್‌ನ ಸ್ವಭಾವ ಇಂದಿಗೂ ಬದಲಾಗಿಲ್ಲ. ಇಂದಿನ ಅನೇಕ ರಾಜಕೀಯ ನಾಯಕರಲ್ಲಿ ತುಘಲಕ್‌ನ ಈ ಒಂದು ಮುಖ ಸ್ಪಷ್ಟವಾಗಿ ಎದ್ದುಕಾಣುತ್ತದೆ. ಆದರೆ ಇದೇ ಸಂದರ್ಭದಲ್ಲಿ ನೆನಪಿಡಬೇಕಾದ ಒಂದು ಸಂಗತಿಯೆಂದರೆ, ತುಘಲಕ್‌ನ ಇನ್ನೊಂದು ಮುಖ ಇಂದಿನ ರಾಜಕೀಯ ನಾಯಕರಲ್ಲಿ ಕಾಣಸದೇ ಹೋಗುತ್ತದೆ. ತುಘಲಕ್‌ನ ಆತ್ಮವಿಮರ್ಶೆ, ಆತನ ದೂರದೃಷ್ಟಿ, ಪಕ್ಷಾತೀತ ನಿಲುವು ಇಂದಿನ ರಾಜಕೀಯ ನಾಯಕರಲ್ಲಿ ಕಾಣಿಸುವುದಿಲ್ಲ. ಸ್ವಂತ ಅನುಭವದ ಮೂಲಕ ಪ್ರಕಟವಾಗುವ ಆತನ ಅನುಭಾವದ ನೆಲೆಗಳಂತೂ ಇಂದಿನ ನಾಯಕರಿಗೆ ದಕ್ಕುವುದೇ ಇಲ್ಲ. ಈ ಕಾರಣಕ್ಕಾಗಿ ಇಲ್ಲಿ ತುಘಲಕ್ ಮತ್ತೆ ಆದರ್ಶದ ಮುಖ ಕಟ್ಟಿಕೊಳ್ಳಲು ಸಾಧ್ಯವಾಗುತ್ತದೆ.

ತುಘಲಕ್‌ನ ಆಡಳಿತದ ಪ್ರಾರಂಭದ ದಿನಗಳನ್ನು ಗಮನಿಸಿದರೆ ಆತನ ಪ್ರಾಮಾಣಿಕತೆ ಸ್ಪಷ್ಟವಾಗುತ್ತದೆ. ರಾಜ್ಯದಲ್ಲಿ ಸಮತೆ ತರುವ ಸಲುವಾಗಿ, ಪ್ರಗತಿ ತರುವ ಸಲುವಾಗಿ ಆತ ಪ್ರಯತ್ನಿಸುತ್ತಾನೆ. ನಾಡಿನಲ್ಲಿ ಕೇವಲ ಶಾಂತಿಯಿದ್ದರೆ ಸಾಕಾಗುವುದಿಲ್ಲ, ಜೀವಕಳೆ ಬೇಕು ಎಂದು ಹೇಳುವ ಆತನ ಮಾತುಗಳಲ್ಲಿ, ಪ್ರಜೆಗಳಿಗಾಗಿ ಹಗಲಿರುಳೂ ಶ್ರಮಿಸುತ್ತಿರುವ ಆತನ ಕ್ರಿಯಾಶೀಲತೆಯಲ್ಲಿ ಜನಪರ ನಿಲುವು ಸ್ಪಷ್ಟವಾಗಿದೆ. "ನನಗಿದ್ದ ಚಿಂತೆ ನನ್ನ ವೈರಿಗಳದ್ದಲ್ಲ, ನನ್ನ ಪ್ರಜೆಗಳದ್ದು" ಎಂದು ನುಡಿವ ಆತನ ನುಡಿಯಲ್ಲಿಯ ಪ್ರಾಮಾಣಿಕತೆಯನ್ನು ಗಮನಿಸಬೇಕು. ಆದರೆ ಈ ಕ್ರಿಯಾಶೀಲತೆ, ಪ್ರಜೆಗಳ ಮೇಲಿದ್ದ ನಂಬಿಗೆ ಕೊನೆಯತನಕ ಉಳಿಯುವುದಿಲ್ಲ. ಬರಗಾಲ, ಬಡತನ, ಹಸಿವು ಪ್ರಜೆಗಳನ್ನು ಮುತ್ತಿಕೊಂಡು, ಹರಿದು ತಿನ್ನತೊಡಗಿದಾಗ, ತುಘಲಕ್ ಅಸಹಾಯಕ ನಾಗುತ್ತಾನೆ. ಇಂತಹದೇ ಸಂದರ್ಭದಲ್ಲಿ ಆಯಿನೇ ಉಲ್ಮುಲ್ಕನ ದಾಳಿಯ ಸುದ್ದಿ ಆತನನ್ನು ತತ್ತರಿಸುವ ಹಾಗೆ ಮಾಡುತ್ತದೆ. ಇಂತಹ ವ್ಯವಸ್ಥೆಯಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು, ತುಘಲಕ್ ತಂತ್ರಗಳನ್ನು ರೂಪಿಸುತ್ತ ಹೋಗುತ್ತಾನೆ, ಅವುಗಳಲ್ಲಿ ಅನೇಕವು ಕುತಂತ್ರಗಳೇ ಆಗಿರುತ್ತವೆ. ಹಿಂಸೆಯಿಂದ ಹಿಂಸೆ ಬೆಳೆಯುತ್ತ ಹೋಗುತ್ತದೆ, ಕೊಲೆಯಿಂದ ಕೊಲೆ ಹೆಚ್ಚಾಗುತ್ತ ಹೋಗುತ್ತದೆ. ಅನಿವಾರ್ಯವಾಗಿ ಆತ ಅನೇಕ ಕೊಲೆಗಳಿಗೆ, ಸಾವುಗಳಿಗೆ ಕಾರಣನಾಗುತ್ತಾನೆ. ಮೋಸ-ಕಪಟತನಗಳ ಮೂಲಕ ಅಧಿಕಾರ ಉಳಿಸಿಕೊಳ್ಳುವ ಸ್ಥಿತಿ ಆತನಿಗೆ ಅನಿವಾರ್ಯವಾಗುತ್ತದೆ. ಆಗ ತಂತ್ರ-ಕುತಂತ್ರಗಳು ತೀವ್ರಗೊಳ್ಳುತ್ತವೆ. ಈ ಅಧಿಕಾರದ ಲಾಲಸೆ ಅಧಿಕವಾದಾಗ ನನ್ನವರು-ತನ್ನವರು ಎಂಬ ಭೇದ ಹೊರಟುಹೋಗುತ್ತದೆ. ಹಿಂದೂ-ಮುಸ್ಲೀಂ ಎಂಬ ವ್ಯತ್ಯಾಸ ಇಲ್ಲವಾಗುತ್ತದೆ. ದೇವರ ಪ್ರಾರ್ಥನೆಯೇ ದೇಶಭ್ರಷ್ಟಗೊಳಿಸಲ್ಪಡುತ್ತದೆ.

ಪ್ರಾರಂಭದಲ್ಲಿ ಯಾವ ಪ್ರಜೆಗಳನ್ನು ಕಂಡರೆ ಆತ ವಿಶ್ವಾಸ ತೋರಿಸುತ್ತಿದ್ದನೊ ನಂತರದಲ್ಲಿ ಅಂತಹ ಪ್ರಜೆಗಳನ್ನು ಸಹಿಸದಂತಾಗುತ್ತಾನೆ. ಮನುಷ್ಯರು ಮಾಡಿಟ್ಟ ಕೊಳೆಯನ್ನು ತೊಳೆಯಲಿಕ್ಕೆ ನಾನು ದೇವರನ್ನೇಕೆ ಕರೆಯಬೇಕು? ಎಂದು ಪ್ರಶ್ನಿಸುತ್ತಾನೆ. ಮೊಣಕಾಲ ಮೇಲೆ ಬಹಳ ದೂರ ನಡೆಯುವುದು ಯಾರಿಗೂ ಸಾಧ್ಯವಿಲ್ಲವೆಂದು ತಿಳಿದುಕೊಂಡಾಗ, ತುಘಲಕ್‌ನ ಮತ್ತೊಂದು ಮುಖ ಸ್ಪಷ್ಟವಾಗುತ್ತ ಹೋಗುತ್ತದೆ. 'ಆತನು ಬಯಸುವುದು ಅಂಬೆಗಾಲಿಕ್ಕಿ ನಡೆಯುವ ಸರಕಾರವಲ್ಲ, ನಾಗಾಲೋಟದ ಆಡಳಿತ. ಆತನ ಈ ತೀವ್ರತೆಗೆ, ಮಹಾತ್ವಾಕಾಂಕ್ಷೆಗೆ ವ್ಯವಸ್ಥೆ ಸಂಗಡ ಬಾರದೇ

ಹೋಗುತ್ತದೆ, ಪ್ರಜೆಗಳು ಸ್ಪಂದಿಸದೇ ಹೋಗುತ್ತಾರೆ, ಮಂತ್ರಿ-ಅಧಿಕಾರಿಗಳು ಮೌನ ವಹಿಸುತ್ತಾರೆ. ಆಗ ತುಘಲಕ್‌ನ ಹುಚ್ಚು ಹೆಚ್ಚುತ್ತಲೇ ಹೋಗುತ್ತದೆ.

ಈ ನಾಟಕದಲ್ಲಿ ತುಘಲಕ್‌ನನ್ನು ಅನೇಕರು ಹುಚ್ಚನೆಂದು ಭಾವಿಸಿದ್ದಾರೆ. ಸ್ವತಃ ತುಘಲಕ್‌ನಿಗೂ ಈ ವಿಷಯ ತಿಳಿದಿದೆ. ಆದರೆ ತುಘಲಕ್ ನಿಜವಾಗಿಯೂ ಹುಚ್ಚನಲ್ಲ, ಹಾಗೆಂದು ಹುಚ್ಚನಂತೆ ನಟಿಸುವದೂ ಇಲ್ಲ. ಆ ಸಂದರ್ಭದಲ್ಲಿ ಹುಚ್ಚು ಕೂಡಾ ಆತನಿಗೆ ಅನಿವಾರ್ಯವಾಗುತ್ತದೆ. ತುಘಲಕ್‌ನಿಗೆ ಎದುರಿಗಿರುವ ಕಟು ವಾಸ್ತವಕ್ಕಿಂತ ಇಲ್ಲದೇ ಇರುವ ಹೊಸ ಕನಸುಗಳ ಬಗೆಗೆ ಅಪಾರವಾದ ನಂಬಿಕೆಯಿದೆ. ಹೀಗಾಗಿ ಆತನ ನಡೆ-ನುಡಿ ಉಳಿದವರಿಗಿಂತ ಭಿನ್ನವಾಗಿ ಕಾಣಿಸುತ್ತದೆ. ಆಗ ಆತ ಹುಚ್ಚನಂತೆ ಕಾಣಿಸುತ್ತಾನೆ. ಈ ಹೊತ್ತಿನಲ್ಲಿ ಹುಗಿದು ಹೋದವರಿಗೆ ನಾಳಿನ ಬುದ್ಧಿ ಹೇಗೆ ಬಂದೀತು? ಎನ್ನುವ ಆತನ ಪ್ರಶ್ನೆಯಲ್ಲಿಯೇ ಆತನ ಆಲೋಚನೆಯ ನೆಲೆಗಳು ಸ್ಪಷ್ಟವಾಗಿವೆ. ಕೇವಲ ಅರಸನ ಮಗನಾದ ಮಾತ್ರಕ್ಕೆ ನಾನು ಅರಸನೆನಿಸಿಕೊಳ್ಳಬಹುದೆ? ಎಂದು ಕೇಳುವ ಆತನ ಪ್ರಶ್ನೆಯಂತೂ ತುಂಬ ಮುಖ್ಯವಾಗಿದೆ.

ತುಘಲಕ್‌ನ ಸಂಘರ್ಷವಿರುವುದು ವೈರಿ ಅರಸರೊಂದಿಗಲ್ಲ, ಸ್ವತಃ ತನ್ನ ಪ್ರಜೆಗಳೊಂದಿಗೆ ಮತ್ತು ತನ್ನೊಂದಿಗೆ. ಇಲ್ಲಿಯೇ ತುಘಲಕ್ ಉಳಿದವರಿಗಿಂತ ಭಿನ್ನನಾಗಲು ಸಾಧ್ಯವಾಗುತ್ತದೆ. ರಾಜ್ಯವನ್ನು ವಿಸ್ತರಿಸಬೇಕೆಂದರೆ ಆತನಲ್ಲಿ ಸಮರ್ಥ ಸೈನ್ಯವಿಲ್ಲ. ಪ್ರಜೆಗಳಿಗೆ ಒಳಿತನ್ನು ಮಾಡಬೇಕೆಂದರೆ ಬರಗಾಲ ಬಿದ್ದಿದೆ. ರಾಜ್ಯದ ಬೊಕ್ಕಸ ಬರಿದಾಗಿದೆ. ಆದರೆ ತುಘಲಕ್‌ನಿಗೆ ರಾಜ್ಯವನ್ನಾಳುವ ಮಹತ್ವಾಕಾಂಕ್ಷೆ ಅಧಿಕವಾಗಿದೆ. ಆಗ ಆತ ಅನಿವಾರ್ಯವಾಗಿ ಚದುರಂಗದಾಟಕ್ಕೆ ಶರಣಾಗುತ್ತಾನೆ. ವೈರಿ ರಾಜರನ್ನು ಕೊಲ್ಲುವುದು ಅಸಾಧ್ಯವಾದಾಗ, ತನ್ನ ರಕ್ಷಣೆಯೊಂದೇ ಮುಖ್ಯವಾದಾಗ ಆತ ಅನಿವಾರ್ಯವಾಗಿ ತನ್ನ ಅಕ್ಕಪಕ್ಕದಲ್ಲಿದ್ದ ಆನೆ-ಕುದುರೆ-ಒಂಟೆಗಳನ್ನು ಬಲಿ ಕೊಡುತ್ತಾನೆ. ಆಗ ಶೇಖ ಇಮಾಮುದ್ದೀನರಂತಹ ಧರ್ಮಗುರುಗಳು, ಮಲತಾಯಿಯಂತಹ ಕುಟುಂಬದ ಸದಸ್ಯರು, ಶಿಹಾಬುದ್ದೀನನಂತಹ ಸನ್ಮಿತ್ರರು ಅನಿವಾರ್ಯವಾಗಿ ಬಲಿಯಾಗುತ್ತಾರೆ.

ಸಾಮಾನ್ಯವಾಗಿ ಸುಲ್ತಾನರಾದವರಿಗೆ ವೈರತ್ವವಿರುವುದು, ತನ್ನ ಸಾಮ್ರಾಜ್ಯದ ಮೇಲೆ ದಂಡೆತ್ತಿ ಬರುವ ಇತರ ರಾಜರೊಂದಿಗೆ. ಆದರೆ ಇಲ್ಲಿ ತುಘಲಕ್‌ನ ದಾರಿ ಬೇರೆಯದೇ ಆಗಿದೆ. ಆತನಿಗೆ ನಿಜವಾಗಿ ವೈರಿಯಾಗಬೇಕಾದವನು ಆಯಿನೇ ಉಲ್ಮುಲ್ಕ. ಆದರೆ ತುಘಲಕ್‌ನಿಗೆ ಆಯಿನೇ ಉಲ್ಮುಲ್ಕನ ಬಗೆಗೆ ಅಪಾರವಾದ ಗೌರವವಿದೆ. ಚದುರಂಗ ಆಡಿದರೆ ಆಯಿನೇ ಉಲ್ಮುಲ್ಕನೊಂದಿಗೇ ಆಡಬೇಕೆಂದು ಹೇಳುತ್ತಾನೆ. ಹಿಂದೆ ಈ ಆಯಿನೇ ಉಲ್ಮುಲ್ಕ, ತುಘಲಕ್ ಕಟ್ಟಿದ ಚದುರಂಗದಾಟದಲ್ಲಿದ್ದ ತಪ್ಪನ್ನು ಎತ್ತಿ ತೋರಿಸುತ್ತಾನೆ. ಸುಲ್ತಾನ ಮೂರು ತಿಂಗಳಲ್ಲಿ ಕಟ್ಟಿದ್ದ ಆಟವನ್ನು, ಆಯಿನೇ ಉಲ್ಮುಲ್ಕ ಅರ್ಧ ನಿಮಿಷದಲ್ಲಿ ಕೆಡವಿಬಿಡುತ್ತಾನೆ. ಇದು ತುಘಲಕ್‌ನ ಮೇಲೆ ತೀವ್ರ ಪರಿಣಾಮ ಬೀರಿದೆ.

ಜಾಣತನ-ಮಹತ್ವಾಕಾಂಕ್ಷೆಯಂತಹ ಗುಣಗಳು ವೈರಿ ರಾಜರಲ್ಲಿದ್ದರೂ ಅದನ್ನು ತುಘಲಕ್-ಮೆಚ್ಚಿಕೊಳ್ಳುತ್ತಿದ್ದ. ಹೀಗಾಗಿ ತುಘಲಕ್‌ನಿಗೆ ಆಯಿನೇ ಉಲ್ಮುಲ್ಕರಂತಹ ವೈರಿ ರಾಜರಿಗಿಂತ, ಶೇಖ ಇಮಾಮುದ್ದೀನನಂತಹ ಧರ್ಮಗುರುಗಳೇ ಹೆಚ್ಚು ಅಪಾಯಕಾರಿಯಾಗಿ ಕಾಣಿಸುತ್ತಾರೆ. ಶಿಹಾಬುದ್ದೀನನಂತಹ ಸನ್ಮಿತ್ರರಿಗಿಂತ, ಚಾಣಾಕ್ಷತನ ತೋರಿಸುವ ಅಝೀಝನಂತಹ ಅಗಸರೇ ಮುಖ್ಯರಾಗುತ್ತಾರೆ. ಈ ಕಾರಣಕ್ಕಾಗಿಯೇ ತುಘಲಕ್ ಸನ್ಮಾನಿಸಬೇಕಾಗಿದ್ದ ಧರ್ಮಗುರು ಶೇಖ

ಇಮಾಮುದ್ದೀನನನ್ನು ಸಾಯಿಸುತ್ತಾನೆ. ಸಾಯಿಸಬೇಕಾಗಿದ್ದ ಅಝೀಝುನನ್ನು ಸರದಾರನನ್ನಾಗಿ ಮಾಡುತ್ತಾನೆ. ತುಘಲಕ್‌ನ ಈ ವಿರೋದಾಭಾಸ ಗುಣ ಪ್ರಜೆಗಳಿಗೆ ಹುಚ್ಚುಚ್ಚಾಗಿ ಕಂಡರೆ; ಸುಲ್ತಾನನಿಗೆ ಅದೇ ಹೊಸ ಸಾಧ್ಯತೆಯಾಗಿ ಕಾಣಿಸುತ್ತದೆ. ಸುಲ್ತಾನನ ಮೇಲೆ ನಂಬಿಕೆಯಿಡದೇ ಇದ್ದ ಮಲತಾಯಿಗಿಂತ, ಸುಲ್ತಾನನ ಮೇಲೆ ಅಪಾರ ನಂಬಿಕೆಯಿಟ್ಟಿರುವ ಆತನ ವಜೀರ, ಮುಹಮ್ಮದ ನಜೀರ ತುಂಬಾ ಮುಖ್ಯನಾಗುತ್ತಾನೆ. ಅಂತಹ ನಜೀರನನ್ನು ತನ್ನ ಮಲತಾಯಿಯೇ ಕೊಲ್ಲಿಸಿದಳೆಂದು ತಿಳಿದಾಗ ಆತನಿಗೆ ಸಹಿಸುವುದಾಗುವುದಿಲ್ಲ. ಆಗ ಆಕೆಗೆ ಚಿತ್ರಹಿಂಸೆಯ ಮರಣ ದಂಡನೆಯಾಗಬೇಕೆಂದು ಆದೇಶಿಸುತ್ತಾನೆ. ಇಲ್ಲಿ ತುಘಲಕ್ ರಕ್ತಸಂಬಂಧವನ್ನಾಗಲಿ, ಮಲತಾಯಿಯೆಂಬ ಮಮತೆಯನ್ನಾಗಲಿ ಇಟ್ಟುಕೊಳ್ಳುವುದಿಲ್ಲ. ಇಂತಹ ಅನೇಕ ಪ್ರಸಂಗಗಳಲ್ಲಿ ತುಘಲಕ್‌ನಿಗೆ ತನ್ನವರು-ಹೊರಗಿನವರು, ಹಿಂದೂಗಳು-ಮುಸ್ಲೀಂರು, ಬಡವರು-ಶ್ರೀಮಂತರು, ಸ್ನೇಹಿತರು-ವೈರಿಗಳು ಎಂಬ ಭೇದಭಾವವೇ ಕಾಣುವುದಿಲ್ಲ. ನಂಬಿಕೆಗೆ ದ್ರೋಹ ಮಾಡಿದವರು ಯಾರೇ ಆಗಿರಲಿ ಅವರು ಶಿಕ್ಷೆ ಅನುಭವಿಸಲೇಬೇಕು. ಚಾಣಾಕ್ಷತನ-ಮಹತ್ವಾಕಾಂಕ್ಷೆ ಯಾರಲ್ಲೇ ಇರಲಿ ಅದನ್ನು ಸ್ವಾಗತಿಸಬೇಕು. ಇದು ತುಘಲಕ್‌ನ ಸಿದ್ಧಾಂತವಾಗಿತ್ತು. ಅಂತೆಯೇ ಆತನ ರಾಜ್ಯದಲ್ಲಿ ದೊರೆತ ಹೆಣಗಳಲ್ಲಿ ವೈರಿಗಳಿಗಿಂತ ತನ್ನ ಪ್ರಜೆಗಳದೇ ಸಂಖ್ಯೆ ಹೆಚ್ಚಾಗಿತ್ತು. ಹಿಂದೂಗಳಿಗಿಂತ ಮುಸ್ಲೀಂರ ಸಂಖ್ಯೆಯೇ ಜಾಸ್ತಿಯಾಗಿತ್ತು.

ಕೆಲವು ಪ್ರಜೆಗಳು ಹಾಗೂ ಆಝುಂನಂತಹ ವ್ಯಕ್ತಿಗಳು, ಕೆಲವು ಅಮೀರರು ತುಘಲಕ್‌ನನ್ನು ಹುಚ್ಚನೆಂದೇ ತಿಳಿದಿದ್ದಾರೆ. ತುಘಲಕ್ ತನ್ನ ರಾಜಧಾನಿಯನ್ನು ದಿಲ್ಲಿಯಿಂದ ದೌಲತ್ತಾಬಾದಗೆ ವರ್ಗಾಯಿಸಿ, ಎಲ್ಲ ಪ್ರಜೆಗಳೂ ದಿಲ್ಲಿ ಬಿಟ್ಟು ದೌಲತ್ತಾಬಾದಗೆ ತೆರಳುವಂತೆ ಆದೇಶ ಹೊರಡಿಸಿದ್ದು ಮತ್ತು ಹಾಗೆ ಕಾರ್ಯೋನ್ಮುಖವಾದದ್ದು ಅನೇಕರಿಗೆ ತೊಂದರೆಯನ್ನುಂಟು ಮಾಡಿದ ಪ್ರಸಂಗವಾಗಿದೆ. ಆದರೆ ತುಘಲಕ್‌ನ ಸಿಂಹಾಸನ ಉಳಿಯಲು, ತುಘಲಕ್‌ನಿಗೆ ಇದು ಅನಿವಾರ್ಯವಾದ ಪರಿಹಾರವಾಗಿದೆ. ದಿಲ್ಲಿಯಲ್ಲಿಯೇ ಉಳಿದಿದ್ದರೆ, ವೈರಿರಾಜರ ದಾಳಿ ಖಂಡಿತ. ಆಯಿನೇ ಉಲ್ಮುಲ್ಕರಂಥವರು ಹೊಂಚು ಹಾಕುತ್ತಿರುವುದು ತಿಳಿದಿದೆ. ಈ ದಾಳಿಯನ್ನೆದುರಿಸಲು ಸುಲ್ತಾನನಲ್ಲಿ ಸಾಕಷ್ಟು ಸೈನ್ಯವಿಲ್ಲ. ಎಲ್ಲರ ಕಣ್ಣು ದಿಲ್ಲಿಯ ಮೇಲೆ. ದೌಲತ್ತಾಬಾದಗೆ ರಾಜಧಾನಿ ವರ್ಗಾಯಿಸುವುದರಿಂದ ತಾತ್ಕಾಲಿಕವಾಗಿಯಾದರೂ ಈ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಬಹುದೆಂದು ತಿಳಿದ ತುಘಲಕ್ ಅಂತಹ ನಿರ್ಣಯ ಕೈಕೊಳ್ಳುತ್ತಾನೆ.

ತುಘಲಕ್ ತೆಗೆದುಕೊಂಡ ಎರಡನೇ ನಿರ್ಣಯವೆಂದರೆ ಬೆಳ್ಳಿ ನಾಣ್ಯಗಳ ಜತೆಗೆ ತಾಮ್ರದ ನಾಣ್ಯಗಳನ್ನು ಜಾರಿಗೆ ತಂದುದು; ಈ ನಿರ್ಣಯ ತೆಗೆದುಕೊಳ್ಳುವಂತವರು ಹುಚ್ಚರೆಂದೇ ಪ್ರಜೆಗಳ ಅಭಿಪ್ರಾಯ. ಆದರೆ ವಾಸ್ತವ ಬೇರೆಯಾಗಿದೆ. ನಾಡು ತೀವ್ರ ಬರಗಾಲದಿಂದ ತತ್ತರಿಸುವ ಆ ಸಂದರ್ಭದಲ್ಲಿ ನಾಣ್ಯಗಳನ್ನು ಸಿದ್ಧಪಡಿಸಲು ಅಧಿಕ ಪ್ರಮಾಣದಲ್ಲಿ ಬೆಳ್ಳಿ ಇಲ್ಲ. ವ್ಯಾಪಾರದ ಚಲಾವಣೆಗೆ ನಾಣ್ಯಗಳು ಬೇಕೇ ಬೇಕು. ಈ ಸಮಸ್ಯೆಯನ್ನು ಬಗೆಹರಿಸಲು ತುಘಲಕ, ತಾಮ್ರ ನಾಣ್ಯಗಳನ್ನು ಜಾರಿಗೆ ತರುತ್ತಾನೆ. ಇಂತಹ ಅನೇಕ ಪ್ರಸಂಗಗಳಲ್ಲಿ ತುಘಲಕ್ ನಿಜವಾದ ಅರ್ಥಶಾಸ್ತ್ರಜ್ಞನಂತೆ ಕಾಣಿಸುತ್ತಾನೆ. ಈ ಸತ್ಯವನ್ನರಿಯದ ಕೆಲವರು ಆತನನ್ನು ಹುಚ್ಚನೆಂದು ಕರೆಯುತ್ತಾರೆ. ಇಂತಹ ತೆಗಳಿಕೆ-ಹೊಗಳಿಕೆಗಳಿಗೆ ತುಘಲಕ್ ಬೆಲೆ ಕೊಡುವುದಿಲ್ಲ.

"ತಾಮ್ರಕ್ಕೆ ಬೆಳ್ಳಿಯ ಬೆಲೆ ಹೇಗೆ ಬಂದೀತು ಸ್ವಾಮಿ?"-ಎಂದು ಶಿಹಾಬುದ್ದೀನ ಕೇಳಿದಾಗ, ತುಘಲಕ್ ಹೀಗೆ ಹೇಳುತ್ತಾನೆ-"ನಾವು ತಾಮ್ರ-ಬೆಳ್ಳಿಗಳ ಬಗ್ಗೆ ವಿಚಾರ ನಡೆಸಿಲ್ಲ. ನಮ್ಮ ಎದುರಿಗೆ

ಇರುವುದು ನಾಣ್ಯಗಳ ಪ್ರಶ್ನೆ! ನಾಣ್ಯ ಕೇವಲ ಬೆಲೆಯ ಅಳತೆಯ ಸಾಧನ. ಅದಕ್ಕೆ ಸ್ವಂತದ ಬೆಲೆ ಎಲ್ಲಿ? ಬೆಲೆ ಇರುವುದು ಅರಸನ ಮಾತಿಗೆ, ಅವನ ರಾಜಮುದ್ರೆಗೆ" ಎನ್ನುವ ನುಡಿಗಳಲ್ಲಿರುವ ಅಂತರಾರ್ಥವನ್ನು ಗಮನಿಸಬಹುದಾಗಿದೆ.

ಎಲ್ಲ ಇರುವ ಸಾಮ್ರಾಜ್ಯವನ್ನು ಮುನ್ನಡೆಸುವುದು ಸುಲಭ. ಆದರೆ ಏನೂ ಇಲ್ಲದ ಸಂದರ್ಭದಲ್ಲಿ ಸಾಮ್ರಾಜ್ಯ ಕಟ್ಟುವುದು ಕಷ್ಟ. ಇಂತಹ ಕಷ್ಟಗಳನ್ನು ಎದುರಿಸುತ್ತಲೇ ತುಘಲಕ್ ಸಿಂಹಾಸನವನ್ನೇರುತ್ತಾನೆ. ಇದ್ದ ವ್ಯವಸ್ಥೆಯಲ್ಲಿ ಏನು ಸುಧಾರಣೆ ಮಾಡಲು ಸಾಧ್ಯ ಎಂದು ಆಲೋಚಿಸುತ್ತಾನೆ. ತನ್ನ ಅಸ್ತಿತ್ವಕ್ಕಾಗಿ, ತನ್ನ ಸಿಂಹಾಸನದ ಅಸ್ತಿತ್ವಕ್ಕಾಗಿ ಎಲ್ಲ ಪ್ರಯತ್ನಗಳನ್ನೂ ಮಾಡುತ್ತಾನೆ. ಆ ಪ್ರಯತ್ನಗಳಲ್ಲಿ ಕೆಲವು ಹಿಂಸೆಯಿಂದ ಕೂಡಿಕೊಳ್ಳುತ್ತವೆ, ಕೆಲವು ಕೊಲೆಗಳಲ್ಲಿ ಸಮಾಪ್ತಿಯಾಗುತ್ತವೆ. ಸದಾ ತನ್ನ ಸಿಂಹಾಸನದ ಬಗೆಗೆ ಮತ್ತು ತನ್ನ ಸಾಮ್ರಾಜ್ಯದ ಬಗೆಗೆ ಚಿಂತಿಸುತ್ತಿದ್ದ ತುಘಲಕ್‌ನಿಗೆ, ತನ್ನ ಹಿಂದಿನ ಸುಲ್ತಾನರ ಇತಿಮಿತಿಗಳು ಗೊತ್ತಾಗಿವೆ. ಹೀಗಾಗಿ ಈತ ಉಳಿದ ಸುಲ್ತಾನರಿಗಿಂತ ಭಿನ್ನನಾಗಿಯೇ ಬೆಳೆಯುತ್ತಾನೆ. ಹಿಂದಿನ ಸುಲ್ತಾನರಿಗೆ ಕಿರೀಟದ ಬಜ್ಜೆಯನ್ನು ತಡೆದುಕೊಳ್ಳಲಿಕ್ಕಾಗುತ್ತಿರಲಿಲ್ಲ, ಆದರೆ ಅದನ್ನು ತೆಗೆದಿಡುವ ಧೈರ್ಯವೂ ಅವರಿಗಿರಲಿಲ್ಲ. ಹೀಗಾಗಿ ಅವರು ತಾರುಣ್ಯದಲ್ಲಿ ಮುಪ್ಪು ಬಂದು ಸತ್ತರೆಂದು ಸ್ವತಃ ತುಘಲಕ್‌ನೇ ತನ್ನ ಹಿರಿಯರ ಬಗೆಗೆ ವ್ಯಾಖ್ಯೆ ಮಾಡುತ್ತಾನೆ. ತುಘಲಕ್ ಉಳಿದ ಸುಲ್ತಾನರಿಗಿಂತ ಭಿನ್ನವಾಗಿ ಆಲೋಚಿಸುವುದರಿಂದ, ತೀವ್ರ ನಿರ್ಣಯ ತೆಗೆದು ಕೊಳ್ಳುವುದರಿಂದ ಅನೇಕ ದುರಂತಗಳಿಗೆ ಕಾರಣನಾಗುತ್ತಾನೆ.

ತುಘಲಕ್‌ನ ವ್ಯಕ್ತಿತ್ವ ಬಹುಮುಖಿಯಾದುದಾಗಿದೆ. ಉಳಿದ ದೊರೆಗಳಂತೆ ಆತ ಕೇವಲ ಒಬ್ಬ ಸುಲ್ತಾನ ಮಾತ್ರವಲ್ಲ, ಸುಲ್ತಾನನಾಗಿರುವುದರ ಜತೆಗೆ ಕವಿ ಮನಸ್ಸಿನವನಾಗಿದ್ದಾನೆ. ಮನುಷ್ಯನಾಗಿದ್ದುಕೊಂಡೇ ದೊಡ್ಡವನಾಗಬೇಕೆಂದು ಬಯಸುವವನಾಗಿದ್ದಾನೆ. ತೀವ್ರತರವಾದ ಮಹತ್ವಾಕಾಂಕ್ಷಿಯಾಗಿರುವುದರೊಂದಿಗೆ, ಅದ್ಭುತವಾದ ಅನುಭಾವಿಯಾಗಿಯೂ ಕಾಣುತ್ತಾನೆ. ಹೋರಾಟಗಾರನ ಛಲ, ತಂತ್ರಗಾರಿಕೆಯ ಫಲ, ಕನಸು ಕಾಣುವ ರೀತಿ, ಕಾವ್ಯ ಹೇಳುವ ನೀತಿ- ಇವೆಲ್ಲವೂ ಆತನಲ್ಲಿ ಮೇಳೈಸಿವೆ. ಧರ್ಮ ಮತ್ತು ರಾಜಕಾರಣ ಇವೆರಡೂ ಬೇರೆ ಬೇರೆಯೆಂದು ತಿಳಿದಿದ್ದರಿಂದಲೇ ಆತ ದೊಡ್ಡ ದುರಂತಗಳನ್ನು ಎದುರಿಸಬೇಕಾಗುತ್ತದೆ. ಪ್ರಾರಂಭದಲ್ಲೇ ಧರ್ಮಗುರು ಶೇಖ ಇಮಾಮುದ್ದೀನ ಈ ಮಾತನ್ನು ಸ್ಪಷ್ಟಪಡಿಸುತ್ತಾನೆ.

"ಸುಲ್ತಾನ, 'ಧಾರ್ಮಿಕ ನೀವು' ಮತ್ತು 'ರಾಜಕಾರಣಿ ನೀವು' ಈ ಇಬ್ಬರನ್ನೂ ಬೇರೆ ಬೇರೆಯಾಗಿಟ್ಟು ಸಂಘರ್ಷಕ್ಕೂ ಕರೆ ಕೊಡುತ್ತಿದ್ದೀರಿ. ಸಂಘರ್ಷ ಬಲಿತರೆ ಇವರಲ್ಲೊಬ್ಬನು ಸಾಯಲೇಬೇಕು." ಎಂದು ಇಮಾಮುದ್ದೀನ ಹೇಳಿದಾಗ ತುಘಲಕ್ ಆರ್ತನಾಗುತ್ತಾನೆ. ಆದರೆ ಈ ಸಂಘರ್ಷವನ್ನು ಹೇಗೆ ನಿಲ್ಲಿಸುವುದೆಂದು ಕೇಳಿಕೊಳ್ಳುತ್ತಾನೆ. ಮುಗ್ಧ ಮಗುವಿನಂತೆ ಅಂಗಲಾಚುತ್ತಾನೆ, ಮಹಾಕ್ರೂರಿಯಂತೆ ಕೊಲೆ ಮಾಡಿಸುತ್ತಾನೆ. ಹೀಗೆ ಬದುಕಿನ ಎಲ್ಲ ಕ್ಷಣಗಳಿಗೂ ತನ್ನನ್ನು ತೆರೆದಿಟ್ಟು ಕೊಳ್ಳುವ ತುಘಲಕ್ ವಿಲಕ್ಷಣ ವ್ಯಕ್ತಿಯಾಗಿ, ವಿಚಿತ್ರ ರೀತಿಯ ನಡವಳಿಕೆಯುಳ್ಳವನಾಗಿ ಕಾಣಿಸಿ ಕೊಳ್ಳುತ್ತಾನೆ. ಈ ಎಲ್ಲದರ ಬಗೆಗೆ ಸೂಕ್ಷ್ಮವಾಗಿ ಆಲೋಚಿಸದವರು ಆತನನ್ನು ಹುಚ್ಚನೆಂದು ಒಂದೇ ಮಾತಿನಲ್ಲಿ ಮುಗಿಸಿಬಿಡುತ್ತಾರೆ. ಸತ್ಯ-ಸುಳ್ಳು, ಹಿಂಸೆ-ಅಹಿಂಸೆ, ಹೆತ್ತವರು-ವೈರಿಗಳು ಈ ಪದಗಳ ನಡುವಿನ ಅಂತರ ತುಂಬ ಸೂಕ್ಷ್ಮವಾದುದು. ಆಯಾ ಕಾಲಘಟ್ಟ, ಆಯಾ ಸಂದರ್ಭಗಳು ಇಲ್ಲಿ ಬಹಳ ಮುಖ್ಯವಾಗುತ್ತವೆ. ಈ ದ್ವಂದ್ವ ಮಾತ್ರ ಬದುಕಿಗೆ ಅನಿವಾರ್ಯ. ಅದನ್ನು ಮೀರುವ ಪ್ರಯತ್ನವೇ ಬದುಕು. ಹೀಗಾಗಿ ಅದು ಒಬ್ಬೊಬ್ಬರಿಗೆ ಒಂದೊಂದು ರೀತಿಯ ಪ್ರಯೋಗಶಾಲೆಯಂತೆ ಕಾಣಿಸುತ್ತದೆ.

ಸುಲ್ತಾನನಾಗಿರುವ ತುಘಲಕ್ ಒಬ್ಬ ಮಹತ್ವದ ಓದುಗನೂ, ತತ್ವಜ್ಞಾನದ ತಿಳುವಳಿಕೆಯುಳ್ಳವನೂ ಆಗಿದ್ದಾನೆ. ಯುನಾನೀ ಚೀನೀ ತತ್ವಜ್ಞರ ಗ್ರಂಥಗಳನ್ನು ಪ್ರಾರಂಭದ ದಿನಗಳಲ್ಲಿಯೇ ಓದಿ ಮುಗಿಸಿದ್ದಾನೆ. ವಿಷ ಕುಡಿದ ನಾಲಿಗೆಯಿಂದ ಅಮೃತ ಸುರಿಸಿದ 'ಸುಕರಾತ', ಕವಿಗಳನ್ನು ಬಯ್ಯುತ್ತ ತಾನೇ ಅಮೋಘ ಕಾವ್ಯವನ್ನು ಬರೆದ 'ಅಫಲಾತೂನ' ಅವರ ಗ್ರಂಥಗಳನ್ನು ಓದಿ ಉತ್ಸಾಹದಿಂದ ಕುಣಿದಿದ್ದ ಹಿಂದಿನ ಆ ರೋಮಾಂಚನದ ದಿನಗಳನ್ನು ತುಘಲಕ್ ನೆನಪಿಸಿಕೊಳ್ಳುತ್ತಾನೆ.

"ಆ ರೋಮಾಂಚನ ನೆನಪಾದಾಗ, ಇನ್ನೊಮ್ಮೆ ಅಜ್ಞಾನಿಯಾಗುವ ಎನಿಸುತ್ತದೆ. ಅವರ ಸತ್ಯ ನನ್ನನ್ನು ಚೂರುಚೂರಾಗಿ ಹರಿಯಿತು. ಈಗ ಅಂಥವರನ್ನು ಅಲ್ಲಗಳೆದು ನಾನು ಒಂದಾಗಬೇಕು, ಪರಧರ್ಮದ ದಾರ್ಶನಿಕರ ಸತ್ಯ ಅಲ್ಲಗಳೆದು ನನ್ನ ರಾಜ್ಯ ಒಂದುಗೂಡಿಸಬೇಕು ಎಂದು ನೀವು ಹಟ ಹಿಡಿದರೆ ನಾನೇನನ್ನಲಿ?" ಎಂದು ಶೇಖ ಇಮಾಮುದ್ದೀನರನ್ನು ಪ್ರಶ್ನಿಸುವ ತುಘಲಕ್‌ನ ಇಂತಹ ಮಾತುಗಳು ಇಂದಿಗೂ ಮುಖ್ಯವೆನಿಸುತ್ತವೆ. ಅದು ಆಗದ ಮಾತೆಂದು ತುಘಲಕ್ ಸ್ಪಷ್ಟಪಡಿಸುತ್ತಾನೆ.

"ಕಾನಪೂರದಲ್ಲಿ ನಿಮ್ಮ ಮಾತಿಗೆ ಮರುಳಾಗಿ ಜನ ಕ್ರಾಂತಿಯ ದೀವಟಿಗೆಯೆತ್ತಿದರು. ಆ ದೀವಟಿಗೆಯಿಂದ ಅರ್ಧ ಊರನ್ನೇ ಸುಟ್ಟರು. ಆದರೆ ದಿಲ್ಲಿಯ ಈ ಪಟಾಂಗಣದಲ್ಲಿ ಮಾತ್ರ ಗುಂಯ್ಗುಡುವ ನೊಣಗಳ ಹೊರತು ಬೇರೆ ಯಾರೂ ಇಲ್ಲ. ಇದೇಕೆ ಎಂದು ನಿಮಗೆ ಹೊಳೆಯಿತೆ?" ಎಂದು ತುಘಲಕ್ ಇಮಾಮುದ್ದೀನರನ್ನು ಪ್ರಶ್ನಿಸಿದಾಗ, ಇಮಾಮುದ್ದೀನ ನಿರುತ್ತರಿಯಾಗುತ್ತಾರೆ. ತುಘಲಕ್ ತನ್ನ ಮಾತಿನ ಚಾಣಾಕ್ಷತನದ ತಂತ್ರದಿಂದಲೇ ಕೊನೆಗೂ ಇಮಾಮುದ್ದೀನರನ್ನು ಮುಗಿಸಿಬಿಡುತ್ತಾನೆ. ತುಘಲಕ್‌ನ ದೋಷಗಳನ್ನು ಎತ್ತಿ ತೋರಿಸುವುದಕ್ಕಾಗಿ ಭಾಷಣ ನೀಡಲು ಬಂದ ಧರ್ಮಗುರು ಶೇಖ ಇಮಾಮುದ್ದೀನ, ಪ್ರಜೆಗಳಿಗೆ ಭಾಷಣ ನೀಡದ ಸ್ಥಿತಿ ತಲುಪಿ, ಕೊನೆಗೆ ತುಘಲಕ್‌ನ ಮಾತುಗಳಿಗೆ ಮರುಳಾಗಿ ತುಘಲಕ್‌ನ ರಾಯಭಾರಿಯಾಗಿ ಕನೋಜಕ್ಕೆ ಹೋಗುತ್ತಾನೆ. ಅಲ್ಲಿ ತುಘಲಕ್‌ನ ಕುತಂತ್ರಕ್ಕೆ ಬಲಿಯಾಗಿ ವ್ಯರ್ಥವಾಗಿ ಸಾಯುತ್ತಾನೆ.

ಹೀಗೆ ಈ ನಾಟಕದ ಯಾವುದೇ ದೃಶ್ಯವನ್ನು ತೆಗೆದುಕೊಂಡು ಚರ್ಚೆ ನಡೆಸಿದರೂ, ಅಲ್ಲಿ ತುಘಲಕ್‌ನನ್ನು ಹೊರತುಪಡಿಸಿ ಮಾತನಾಡುವುದಕ್ಕೆ ಆಗುವುದೇ ಇಲ್ಲ. ಹಾಗೆಂದ ಕೂಡಲೇ ಈತ ಈ ನಾಟಕದ ಧೀರೋದಾತ್ತ-ಆದರ್ಶದ ಮಹಾನಾಯಕನಲ್ಲ. ಉಳಿದ ಕೃತಿಗಳಲ್ಲಿ ಕಾಣಿಸುವಂತಹ ಖಳನಾಯಕನೂ ಅಲ್ಲ. ಕಾರ್ನಾಡರಂತಹ ನಾಟಕಕಾರರು ನಾಯಕ-ಖಳನಾಯಕ ಪರಂಪರೆಯನ್ನು ಕೈಬಿಟ್ಟು ತುಘಲಕ್‌ನೊಬ್ಬನಲ್ಲಿಯೇ ಆ ಎರಡೂ ಪಾತ್ರಗಳನ್ನು ಸಂಯೋಜಿಸಿದ್ದಾರೆ. ಉಳಿದ ಸಾಂಪ್ರದಾಯಿಕ ಕೃತಿಗಳಲ್ಲಿರುವಂತೆ ಇಲ್ಲಿ ಸುಖಾಂತ-ದುಃಖಾಂತ ಇವಾವುದೂ ಮುಖ್ಯವಾಗುವುದಿಲ್ಲ. ಸುಖಾಂತ-ದುಃಖಾಂತಗಳ ನಡುವಿರುವ ಏಕಾಂತ, ಆ ಏಕಾಂತದ ಮೂಲಕವೇ ಹುಟ್ಟಿಕೊಳ್ಳುವ ಅನೇಕ-ಅಂತಗಳನ್ನು-ಹಂತಗಳನ್ನು ಒಳಗೊಂಡಿರುವುದೇ ಈ ನಾಟಕದ ವೈಶಿಷ್ಟ್ಯತೆ ಯಾಗಿದೆ.

ತುಘಲಕ್ ತಾನು ಇಪ್ಪತ್ತೊಂದು ವರುಷದವನಿದ್ದಾಗ, ದೌಲತ್ತಾಬಾದಗೆ ಮೊದಲ ಸಲ ಬಂದಾಗ ಅಲ್ಲಿ ಕೋಟೆ ಕಟ್ಟಿಸಲು ಪ್ರಾರಂಭಿಸಿದ. ಆ ದಿನಗಳನ್ನು ನೆನಪಿಸಿಕೊಂಡು ಆತ ತರುಣ ಕಾವಲುಗಾರನೊಂದಿಗೆ ಮನಬಿಚ್ಚಿ ಮಾತನಾಡುತ್ತಾನೆ. ತಾನು ಆಗ ಕಂಡ ಕನಸನ್ನು ವಿವರಿಸಿ ಹೇಳುತ್ತಾನೆ. "ಒಂದು ರಾತ್ರಿ ನಾನೊಬ್ಬನೇ ಇಲ್ಲಿದ್ದ ಹಳೆಯ ಕೋಟೆಯ ಬುರುಜಿನ ಮೇಲೆ

ನಿಂತಿದ್ದೆ. ದೀವಟಿಗೆಯೊಂದು ಚಿನ್ನದ ಗರಿಗಳನ್ನು ಸುತ್ತ ಸುರಿದು ರೆಕ್ಕೆ ಬಿಚ್ಚಿ ಫಡಫಡಿಸುತ್ತಿತ್ತು. ಅರ್ಧ ಕಟ್ಟಿಟ್ಟ ಮಹಾದ್ವಾರವೊಂದು ಆಕಾಶವನ್ನು ಎದೆಯಲ್ಲಿ ಅವುಚಿ ಹಿಡಿಯಲೆತ್ನಿಸುತ್ತಿತ್ತು. ಆಗಲೇ ಏನೋ ಆಯಿತು-ಯಾರೋ ಮಾಟ ಮಾಡಿದಂತೆ. ನಾನು, ದೀವಟಿಗೆ, ಕೋಟೆ, ಆಕಾಶ-ಎಲ್ಲ ಕರಗಿ ಒಂದಾದೆವು. ನನ್ನ ಸುತ್ತಲಿನ ಕತ್ತಲೆ ನನ್ನ ನರಗಳಲ್ಲಿ ಹರಿಯುತ್ತಿತ್ತು. ಮಿನುಗುವ ನಕ್ಷತ್ರಗಳ ಸ್ಪಂದನ ನನ್ನ ನಾಡಿಯಲ್ಲಿ ನಡೆದಿತ್ತು." ಎಂದು ತರುಣ ಕಾವಲುಗಾರನಿಗೆ ತುಘಲಕ್ ವಿವರಿಸುತ್ತಾನೆ.

ಇತಿಹಾಸದ ತುಘಲಕ್ ಇಂತಹ ಕನಸು ಕಂಡಿದ್ದನೊ, ಇಲ್ಲವೊ, ಆತ ಹುಚ್ಚನಾಗಿದ್ದನೊ-ತತ್ವಜ್ಞಾನಿಯಾಗಿದ್ದನೊ? ಗೊತ್ತಿಲ್ಲ. ಆದರೆ ಕಾರ್ನಾಡರು ಸೃಷ್ಟಿಸಿದ ತುಘಲಕ್ ಇದೆಲ್ಲವೂ ಆಗಿದ್ದ. ಆದ್ದರಿಂದ ಇತಿಹಾಸದ ತುಘಲಕನನ್ನು ಜನ ಮರೆತರೂ, ಕಾರ್ನಾಡರ ತುಘಲಕ್‌ನನ್ನು ಅವರು ಮರೆಯುಂತಿಲ್ಲ. ಏಕೆಂದರೆ ಕಾರ್ನಾಡರ ತುಘಲಕ್ ಒಂದು ಕಲಾಕೃತಿಯ ನಾಯಕ. ನಿಜವಾದ ಒಂದು ಕಲಾಕೃತಿ ಕಾಲಾತೀತ-ಧರ್ಮಾತೀತ. ಹೀಗಾಗಿ ಕಾರ್ನಾಡರ ತುಘಲಕ್ ಇತಿಹಾಸವನ್ನು ಒಡೆಯುತ್ತಲೇ ವರ್ತಮಾನವನ್ನು ಕಟ್ಟಲೆತ್ನಿಸುತ್ತಾನೆ. ಅದೇ ಸಂದರ್ಭದಲ್ಲಿಯೇ ಭವಿಷ್ಯತ್ತಿನ ಕನಸು ಕಾಣುತ್ತಾನೆ.

"ಈ ಸುಂದರ ತೋಟವನ್ನು ಏಕೆ ಹುಚ್ಚನಂತೆ ಹಾಳು ಮಾಡುತ್ತಿರುವೆ, ಮುಹಮ್ಮದ?" ಎಂದು ಮಲತಾಯಿ ಕೇಳಿದಾಗ, ತುಘಲಕ್ ಹೀಗೆ ಉತ್ತರಿಸುತ್ತಾನೆ:

"ಆ ತೋಟವನ್ನು ಕಟ್ಟಿಸಿದಾಗ, ಅದು ಸಾದಿಯ ಕಾವ್ಯದ ರೂಪಕವಾಗಬೇಕು ಎಂಬ ಆಸೆಯಿತ್ತು ನನಗೆ. ಪ್ರತಿಯೊಂದು ಗುಲಾಬಿಯ ಹೂವೂ ಒಂದು ಕವಿತೆಯಾಗಬೇಕು, ಪ್ರತಿಯೊಂದು ಮುಳ್ಳೂ ಸಂವೇದನೆಗೆ ಮೊನೆ ಕೊಡಬೇಕು." ಎಂದು ಕನಸು ಕಾಣುವ ಕಾವ್ಯಲೋಕದ ಈ ತುಘಲಕ್‌ನ ಸೃಷ್ಟಿ ವಿಸ್ಮಯವಾದುದು. ಕಾವ್ಯವೆಂದರೆ ಬದುಕು. ಸುಂದರವಾದ ಬದುಕು ಸೃಷ್ಟಿಯಾಗುವುದೇ ರೂಪಕಗಳ ಮೂಲಕ, ಕನಸುಗಳ ಮೂಲಕ. ಆದರೆ ತನ್ನ ಸಾಮ್ರಾಜ್ಯ ಈಗ ಶವಯಾತ್ರೆಯಾಗಿದೆ, ಇಂತಹ ರಾಜ್ಯಕ್ಕೆ ಈಗ ಸಂಕೇತಗಳ ಅಗತ್ಯವಿಲ್ಲವೆಂದು ಹೇಳುವ ತುಘಲಕ್‌ನ ಈ ಸಂಭಾಷಣೆಯನ್ನು ಗಮನಿಸಿದಾಗ ಕಲಾಕೃತಿಯಾದ ನಾಟಕವೊಂದು ಉಂಟು ಮಾಡುವ ಪರಿಣಾಮವೆಂತಹುದೆಂಬುದು ಸ್ಪಷ್ಟವಾಗುತ್ತ ಹೋಗುತ್ತದೆ.

ತುಘಲಕ್ ಹಲವು ಆಸೆಗಳೊಂದಿಗೆ, ಕೆಲವು ಕನಸುಗಳೊಂದಿಗೆ ಪಟ್ಟವೇರಿದ ಅರಸ. ತನ್ನ ರಾಜ್ಯದಲ್ಲಿಯ ಪ್ರತಿಯೊಂದು ಕಾರ್ಯವೂ ಪ್ರಾರ್ಥನೆಯಾಗಬೇಕೆಂದು ನಂಬಿದ ವ್ಯಕ್ತಿ. ಪ್ರತಿಯೊಂದು ಪ್ರಾರ್ಥನೆ ಅರಿವಿನ ಮೆಟ್ಟಿಲಾಗಬೇಕೆಂದು ಭಾವಿಸಿದಾತ. ಆದರೆ ಆಳ್ವಿಕೆ ಮುಂದುವರೆದಂತೆಲ್ಲ ಎಲ್ಲ ತದ್ವಿರುದ್ಧವಾಗುತ್ತ ಹೋಗುತ್ತದೆ. ಪ್ರಾರ್ಥನೆಯ ಸಂದರ್ಭದಲ್ಲಿಯೇ ಸುಲ್ತಾನ ತುಘಲಕ್‌ನನ್ನು ಕೊಲೆಗೈಯುವ ಸಂಚು ನಡೆಯುತ್ತದೆ. ಇದನ್ನರಿತ ತುಘಲಕ್ ಹಾಗೆ ಸಂಚು ಮಾಡಿದ ಶಿಹಾಬುದ್ದೀನನನ್ನೇ ಕೊಂದುಬಿಡುತ್ತಾನೆ. ಅಂದಿನಿಂದ ಪ್ರಾರ್ಥನೆಯೆಂದರೆ ತುಘಲಕ್‌ನಿಗೆ ಹೇಸಿಗೆಯೆನಿಸುತ್ತದೆ. ಬಹಿರಂಗವಾಗಿ ಪ್ರಾರ್ಥಿಸಿದವರಿಗೆಲ್ಲ ಕಠಿಣ ಶಿಕ್ಷೆಯೆಂದು ಡಂಗುರ ಸಾರಲು ಅಪ್ಪಣೆ ಕೊಡಿಸುತ್ತಾನೆ. "ಪ್ರಾರ್ಥನೆಯ ಯೋಗ್ಯತೆಯಿಲ್ಲ ನಮಗೆ"-ಎಂದು ಸ್ಪಷ್ಟಪಡಿಸಿದ ತುಘಲಕ್ ಪ್ರಾರ್ಥನೆಯೆಂಬ ಮಾತನ್ನೇ ಕಿತ್ತೊಗೆಯುತ್ತಾನೆ.

ತಾನು ನಂಬಿದ ನಂಬಿಕೆಗಳು ಹುಸಿಯಾದಾಗ, ಕಂಡ ಕನಸುಗಳು ಸಾಕಾರಗೊಳ್ಳದೇ ಹೋದಾಗ, ತುಘಲಕ್, ವಿರುದ್ಧ ದಿಕ್ಕಿನಲ್ಲಿ ಈಜಲು ಪ್ರಯತ್ನಿಸುತ್ತಾನೆ. ಇಂತಹ ಅನೇಕ ಪ್ರಯತ್ನಗಳಲ್ಲಿ ವಿಫಲನಾಗುತ್ತ ಹೋಗುತ್ತಾನೆ. ಈ ಎಲ್ಲ ವಿಫಲತೆಗೆ, ಆತನ ರಾಜ್ಯದಲ್ಲಿ ವ್ಯಾಪಿಸಿದ ಹಿಂಸೆ-ಕ್ರೌರ್ಯಗಳಿಗೆ ತುಘಲಕ್‌ನೊಬ್ಬನೇ ಕಾರಣನಾಗುವುದಿಲ್ಲ, ಇಡೀ ವ್ಯವಸ್ಥೆಯೇ ಇದಕ್ಕೆ ಮುಖ್ಯ ಕಾರಣವಾಗಿದೆ. ಬರಗಾಲ-ನಿರುದ್ಯೋಗ-ಮೌಢ್ಯತೆ ಪ್ರಜೆಗಳನ್ನು ತೀವ್ರವಾಗಿ ಕಾಡತೊಡಗಿದಾಗ, ಹೊಸ ಯೋಜನೆಗಳನ್ನು ರೂಪಿಸಲು ತುಘಲಕ್‌ನಲ್ಲಿ ಅಧಿಕ ಸಂಪತ್ತಿಲ್ಲ. ಹೊರಗಿನ ದಾಳಿಗಳಿಂದ ರಕ್ಷಿಸಿಕೊಳ್ಳಲು ಹೆಚ್ಚಿನ ಸೈನ್ಯವಿಲ್ಲ. ಸಂದರ್ಭವನ್ನು ಸಂಯಮದಿಂದ ಅರ್ಥೈಸಿಕೊಂಡು ಮುನ್ನಡೆಸುವಷ್ಟು ತಾಳ್ಮೆಯಂತೂ ತುಘಲಕ್‌ನಲ್ಲಿ ಇಲ್ಲವೇ ಇಲ್ಲ. ಈ ಎಲ್ಲ ಕಾರಣಗಳಿಂದ ತುಘಲಕ್ ವಿಫಲನಾಗುತ್ತಾನೆ. ಅಂತಹ ವಿಫಲತೆಯ ಪ್ರಸಂಗದಲ್ಲಿಯೂ ಆತನಲ್ಲಿದ್ದ ಮಹಾತ್ವಾಕಾಂಕ್ಷೆ ಬೆರಗುಗೊಳಿಸುವಂತಹದ್ದಾಗಿದೆ.

ಸುಲ್ತಾನನ ವಜೀರನಾಗಿದ್ದ ನಜೀಬನಿಂದಾಗಲಿ, ಇತಿಹಾಸಕಾರನಾದ ಬರನಿಯಿಂದಾಗಲಿ, ತುಘಲಕ್‌ನ ಸ್ವಭಾವವನ್ನು, ಆತ ತೆಗೆದುಕೊಳ್ಳುವ ತೀವ್ರತರವಾದ ನಿರ್ಣಯಗಳನ್ನು ಬದಲಿಸಲಿಕ್ಕಾಗುವುದಿಲ್ಲ. ಇಂತಹ ಪ್ರಯತ್ನಗಳನ್ನು ಮಾಡಿದ ಮಲತಾಯಿ ಹಾಗೂ ಧರ್ಮಗುರು ಶೇಖ ಇಮಾಮುದ್ದೀನರಂತವರು ಸ್ವತಃ ಬಲಿಪಶುಗಳಾಗಿ ಬಿಡುತ್ತಾರೆ. ಹೀಗೇಕೆ ನೀವು ಪ್ರಜೆಗಳನ್ನು ಕಂಗೆಡಿಸುತ್ತಿದ್ದೀರಿ? ಎಂದು ಕೇಳಿದ ಬರನಿಯ ಪ್ರಶ್ನೆಗೆ ತುಘಲಕ್ ಸ್ಪಷ್ಟವಾಗಿ ಹೀಗೆ ಉತ್ತರಿಸುತ್ತಾನೆ.

"ನೀನು ತಿಳಿದಷ್ಟು ನ್ಯಾಯ ಸ್ಪಷ್ಟವಾಗಿದ್ದರೆ, ನಾನು ಆಶಿಸಿದಷ್ಟು ತರ್ಕ ಲಲಿತವಾಗಿದ್ದರೆ, ಬಾಳುವುದೆಷ್ಟೋ ಸುಲಭವಾಗುತ್ತಿತ್ತು. ಪಟ್ಟವೇರಿದಂದಿನಿಂದ ಈ ಶಬ್ದಗಳನ್ನು ಹುಡುಕಿ ಓಡುತ್ತಿದ್ದೇನೆ. ನನ್ನ ಬಳಿ ಇರಲಿ ಬರೇ ನಾನು! ನನ್ನ ಹುಚ್ಚು!" ಎಂದು ಹತಾಶಭಾವ ವ್ಯಕ್ತಪಡಿಸುತ್ತಾನೆ. ಹೀಗೆ ಎಲ್ಲವನ್ನೂ-ಎಲ್ಲರನ್ನೂ ಕಳೆದುಕೊಂಡ ತುಘಲಕ್ ಕೊನೆಗೆ ಸಾಧಿಸಿದ್ದಾದರೂ ಏನು? ಎಂಬ ಪ್ರಶ್ನೆಯನ್ನು ಕೇಳಿಕೊಂಡಾಗ, ಹೇಳುವ ಉತ್ತರ ಸುಲಭವಾಗಿರುವುದಿಲ್ಲ. ಬಳಲಿ ಆಯಾಸಗೊಂಡಿದ್ದ ತುಘಲಕ್ ಕೊನೆಯ ದೃಶ್ಯದಲ್ಲಿ ಕಣ್ಣು ಮುಚ್ಚಿ ನಿದ್ದೆ ಮಾಡುತ್ತಾನೆ. ಮುಅದ್ದೀನನು ಪ್ರಾರ್ಥನೆ ಮಾಡಲು "ಅಲ್ಲಾ ಹೋ ಅಕಬರ" ಎಂದು ಕೂಗಿದ ಕೂಡಲೇ ಆ ಧ್ವನಿಗೆ ತುಘಲಕ್ ಎಚ್ಚರಗೊಳ್ಳುತ್ತಾನೆ. ಏನೂ ತಿಳಿಯದವರಂತೆ ಅತ್ತಿತ್ತ ನೋಡುತ್ತಾನೆ. ಭೀತಿ-ಕ್ರೌರ್ಯ ಅವನ ಕಣ್ಣುಗಳ ಮೂಲಕ ಪ್ರಕಟಗೊಳ್ಳುತ್ತದೆ. ಆತನ ಕಣ್ಣುಗಳು ಥಳಥಳ ಹೊಳೆಯುತ್ತವೆ. ಅಲ್ಲಿಗೆ ನಾಟಕ ಮುಕ್ತಾಯವಾಗುತ್ತದೆ.

ತನ್ನೊಡಲೊಳಗೆ ಅನೇಕ ತಲ್ಲಣಗಳನ್ನು-ಕುತೂಹಲಗಳನ್ನು ಇಟ್ಟುಕೊಂಡಿರುವ ಕಾರ್ನಾಡರ 'ತುಘಲಕ್' ನಿಜಕ್ಕೂ ಮಹತ್ವದ ಕೃತಿಯಾಗಿದೆ. ಈ ತುಘಲಕ್‌ನ ಇತಿಹಾಸ ಆರು ಶತಮಾನಗಳಷ್ಟು ಹಳೆಯದಾಗಿದ್ದರೂ, ಈ ನಾಟಕದ ರಚನೆಯಾಗಿ ದಶಕಗಳೇ ಕಳೆದು ಹೋಗಿದ್ದರೂ ಇಂದಿಗೂ ತುಘಲಕ್ ವರ್ತಮಾನವಾಗಿ ಕಾಡತೊಡಗುತ್ತಾನೆ. ಭೂತದ ಬೇರುಗಳನ್ನು ಸಡಿಲಿಸುತ್ತ ಹೋಗುತ್ತಾನೆ.

□

---

ಡಾ. ಬಸವರಾಜ ಸಬರದ, ನಿರ್ದೇಶಕರು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

# ಕೆ.ಎಸ್.ನ. : "ಕೈ ಮರದ ನೆಳಲಲ್ಲಿ"-ಬದುಕಿನ ಹುಡುಕಾಟದ ವ್ಯಾಖ್ಯಾನ

ಡಾ. ಜಿ. ಪ್ರಶಾಂತನಾಯಕ

ಡಿಸೆಂಬರ್ ೨೮-೨೦೦೩ರಲ್ಲಿ ನಿಧನ ಹೊಂದಿದ ಕೆ.ಎಸ್. ನರಸಿಂಹಸ್ವಾಮಿ ತಮ್ಮ ೮೯ರ ವಯಸ್ಸಿನಲ್ಲಿಯೂ ಕಾವ್ಯ ಕುರಿತ ಸೃಜನಶೀಲ ಆಸಕ್ತಿಯನ್ನು ನಿರಂತರವಾಗಿ ಕಾಯ್ದುಕೊಂಡವರು. ಅವರ ಕೊನೆಯ ವರ್ಷದಲ್ಲಿ ಪ್ರಕಟಗೊಂಡ ಎರಡು ಕವನ ಸಂಕಲನಗಳು ಇದಕ್ಕೆ ಸಾಕ್ಷಿ.

ಹೀಗೊಬ್ಬ ಹಿರಿಯ ಕವಿ ಸುಮಾರು ಆರು ದಶಕಗಳಷ್ಟು ಕಾಲ ಕನ್ನಡ ಸಾಹಿತ್ಯದೊಂದಿಗೆ ನಿಕಟ ಬಾಂಧವ್ಯವನ್ನು ಉಳಿಸಿಕೊಂಡು ಬರೆಯುವಾಗ ಹಲವು ನಿರೀಕ್ಷೆಗಳೊಂದಿಗೆ ಅವರ ಕಾವ್ಯವನ್ನು ಸಹೃದಯರು ಎದುರುಗೊಳ್ಳುವುದುಂಟು. ಅಂತಹ ನಿರೀಕ್ಷೆಯನ್ನು ಮಾನವ ಪ್ರೀತಿಯ ಈ ಕವಿ ನಿರಾಶೆ ಮಾಡಲಿಲ್ಲವೆನ್ನುವುದು ಮುಖ್ಯ. ತಮ್ಮ ಕೊನೆಯ ಕವಿತೆಯವರೆವಿಗೂ ಕೆ.ಎಸ್.ನ. ಅದೇ ಲವಲವಿಕೆಯನ್ನು, ಭಾವುಕ ಸಂಬಂಧಗಳನ್ನು, ಬದುಕಿನ ಪ್ರೀತಿಯನ್ನು, ಒಲವು-ಚೆಲುವು, ನೆನಪು- ನಿರೀಕ್ಷೆಗಳನ್ನು ಉಳಿಸಿಕೊಂಡರು. ಯಾವ ಆಧುನಿಕತೆಯ ಆಡಂಬರವೂ, ಯಾಂತ್ರಿಕತೆಯೂ ಈ ಸುಕುಮಾರ ಕವಿಯನ್ನು ಕಾಡಲಿಲ್ಲ ಎನ್ನುವುದು ಚೋದ್ಯ. ಈ ಕವಿಯ ಹದಿಮೂರನೆಯ ಕವನ ಸಂಕಲನವಾದ 'ಕೈಮರದ ನೆಳಲಲ್ಲಿ' ಸಂಕಲನವನ್ನು ವಿಶ್ಲೇಷಿಸುವ ಪ್ರಯತ್ನವಿಲ್ಲಿದೆ. ಒಂದು ದೀರ್ಘ ಕವನವನ್ನು, ಹತ್ತು ಬಿಡಿ ಕವಿತೆಗಳನ್ನು ಒಳಗೊಂಡ ಈ ಸಂಕಲನ ಒಂದು ಪ್ರಯೋಗದ ಪ್ರಯತ್ನವೂ ಹೌದು. ಹಾಗೆ ನೋಡುವಾಗ ಇದು ಮೇಲ್ನೋಟಕ್ಕೆ ಕಥನ ಕವಿತೆ ಎನಿಸುವುದಾದರೂ ಹಾಗೆ ಅಷ್ಟೇ ಚೌಕಟ್ಟಿನಲ್ಲಿಟ್ಟು ನೋಡುವುದೂ ಅಲ್ಲ. ಕವಿತೆಯೇ ಕತೆಯಾಗುವ ಕ್ರಿಯಾಶೀಲವಾದ ತಂತ್ರವೊಂದು ಇಲ್ಲಿ ಕೆಲಸ ಮಾಡುತ್ತಲೇ ಪ್ರಯೋಗಕ್ಕೂ ಮುಂದಾಗಿದೆ ಎನ್ನುವುದು ಮುಖ್ಯ. ನಿರೂಪಣೆಯೂ ಹೀಗೆ ಭಿನ್ನವಾದ ಮಾದರಿಯಲ್ಲಿದೆ. ಕವಿತೆಯೇ ಕತೆಯಾಗಿ ಪ್ರಕಟಗೊಂಡ ಈ

ಪ್ರಯೋಗದಲ್ಲಿ ಹಲವಾರು ಪಾತ್ರಗಳಿವೆ, ವಿಭಿನ್ನವಾದ ಅನುಭವಗಳಿವೆ, ಬದುಕಿನ ಹತ್ತು ಹಲವು ಮಗ್ಗುಲುಗಳಿವೆ. ಅಂದರೆ ಕವಿಯೇ ಪ್ರಾರಂಭದಲ್ಲಿ ಹೇಳುವಂತೆ "ಐದಾರು ಮಂದಿ ಗೆಳೆಯರು ಒಂದೆಡೆ ಕುಳಿತು ತಮ್ಮ ತಮ್ಮ ಜೀವನಾನುಭವಗಳಲ್ಲಿ ತಮಗೆ ಸಾರವತ್ತಾದ್ದೆನ್ನಿಸಿದ್ದನ್ನು ಹೇಳಿಕೊಂಡಿದ್ದಾರೆ". ಇದು ಕಾಲ್ಪನಿಕ ಎನ್ನುವುದನ್ನು ಕವಿ ಸ್ಪಷ್ಟಪಡಿಸುತ್ತಾರೆ. ಆದರೆ ಇದು ಕಾವ್ಯದ ಆಸ್ವಾದನೆ ಅಥವಾ ಫಲಿತಗಳ ಸಂದರ್ಭಕ್ಕೆ ಅಗತ್ಯವಿಲ್ಲ. ಕೆ.ಎಸ್.ನ. ಕಾವ್ಯದ ಸಾಮಾನ್ಯ ಲಕ್ಷಣವಾದ ಸುಕುಮಾರತೆ ಇಲ್ಲಿ ಗಂಭೀರತೆಯ ನೆಲೆಗೆ ಚಾಚಿಕೊಂಡಿದೆ. ವಯಸ್ಸು, ಕಾಲ, ಅನುಭವದ ಪಕ್ವತೆ, ನಿರೀಕ್ಷೆ ಇತ್ಯಾದಿಯಾದ ಸಂಗತಿಗಳು ಭಿನ್ನವಾಗುತ್ತವೆ. ಇಲ್ಲಿನ ಮಾತುಕತೆಯಲ್ಲಿ ಪಾಲ್ಗೊಳ್ಳುವ ಜನರಾದರೂ ಎಂದಿನಂತೆಯೇ ಕೆ.ಎಸ್.ನ. ಕಾವ್ಯದ ಸಾಮಾನ್ಯರೇ ಆಗಿದ್ದಾರೆ. ಮತ್ತೂ ಮುಖ್ಯವಾಗಿ ಅವರುಗಳು ಬಹುಪಾಲು ತಮ್ಮ ಬದುಕಿನ ಅನುಭವಗಳಷ್ಟೇ ತಾಜಾ ಎನ್ನುವಂತೆ ತಾವು ಕಂಡ ಇತರ ಬದುಕುಗಳನ್ನು ಕುರಿತೂ ಚರ್ಚಿಸುತ್ತಾರೆ. ತನ್ಮೂಲಕ 'ಬದುಕು' ಎನ್ನುವ ವ್ಯಾಪಕತೆಯ ಅರ್ಥಗಳಿಗೆ ಇರುವ ವೈವಿಧ್ಯತೆ ವ್ಯಾಖ್ಯಾನಗಳಿಗೆ ಸಾಕ್ಷಿಯಾಗಿಯೂ ಕಾಣಿಸುತ್ತಾರೆ.

ಕೆ.ಎಸ್.ನ. ಅವರ ಹಿಂದಿನ ಕಾವ್ಯದಲ್ಲಿ ಪ್ರಕಟಗೊಂಡ ವ್ಯಷ್ಟಿ ನೆಲೆಯ ಭಾವಗಳಿಲ್ಲಿ ವಿಶಿಷ್ಟವಾಗಿ ಸಮಷ್ಟಿ ನೆಲೆಯನ್ನು ಆರೋಪಿಸಿಕೊಂಡು ವ್ಯಾಪ್ತಿ ಕಂಡುಕೊಳ್ಳಲು ಹಾತೊರೆಯುತ್ತವೆ. ಮುನ್ನುಡಿಯ ಮಾತುಗಳಲ್ಲಿ ಎಚ್.ಎಸ್. ವೆಂಕಟೇಶಮೂರ್ತಿ ಅವರು "ಕೈಮರದ ನೆಳಲಲ್ಲಿ ಸೇರಿದವರು ಹೇಳುವುದು ತಮ್ಮ ಇತಿವೃತ್ತವನ್ನಲ್ಲ; ತಾವು ಕಂಡ ಇನ್ನೊಬ್ಬರ ಇತಿವೃತ್ತವನ್ನು. ಅವರು ಬರೆಯುವುದು ನಕಾಶೆಯನ್ನಲ್ಲ. ಚಿತ್ರ ಮೂಡುವುದಕ್ಕೆ ಮುನ್ನಿನ ನೆಲೆಯ ಚುಕ್ಕಿಗಳನ್ನು ಇಡುವುದಷ್ಟೇ ಆ ಕಥನ ಕ್ರಮದ ತಂತ್ರವಾಗಿದೆ. ಚುಕ್ಕಿಗಳನ್ನು ಹೇಗೆ ಕೂಡಿಸುತ್ತೇವೆಯೋ, ಹೇಗೆ ನಕಾಶೆ ನಿರ್ಮಿಸಿಕೊಳ್ಳುತ್ತೇವೆಯೋ ಅದು ನಮ್ಮ ನಮ್ಮ ಓದಿನ ಪ್ರಾಪ್ತಿ. ಆದುದರಿಂದಲೇ ಹೊಳೆಯುವ ಚುಕ್ಕಿಗಳು ಮತ್ತು ಖಾಲಿ ಬಿಟ್ಟ ಆಕಾಶ ಕೂಡಿಕೊಂಡು ಈ ಕವಿತೆಯ ಹಂದರ ಸಿದ್ಧವಾಗಿದೆ. ಬದುಕಿನ ಗುಂಭತೆಗೆ ಇದು ಕವಿ ಅರ್ಪಿಸುವ ಕನಿಷ್ಠ ಮರ್ಯಾದೆ." ಎಂದು ವ್ಯಾಖ್ಯಾನಿಸುವುದು ಏಕ ಕಾಲಕ್ಕೆ ಕವಿಯ ಪ್ರಯತ್ನ ಮತ್ತು ಸಹೃದಯನ ನಿರೀಕ್ಷೆಗಳೆರಡನ್ನೂ ನಿರ್ದೇಶಿಸುವಂತಿದೆ. ಹಾಗಾಗಿ ಓದುವ ಸಿದ್ಧತೆ, ಅರ್ಥೈಸಿಕೊಳ್ಳುವ ಪರಿಗಳಲ್ಲೂ ಹೊಸತನಕ್ಕೆ ನಿಚ್ಚಳವಾದ ಅವಕಾಶವಿಲ್ಲಿದೆ.

ಕೈಮರ ಹಾದಿ ತೋರುವ ಸಾಧನವಾಗುವುದು ಎನ್ನುವ ಸಾಮಾನ್ಯ ಕಾರಣದಿಂದಲೂ ಅದು ಸಹಾಯಕನ ಪಾತ್ರ ನಿರ್ವಹಿಸುತ್ತದೆ, ನೆಳಲು ಎನ್ನುವ ವಿಶಿಷ್ಟಾರ್ಥಕ್ಕೂ ಚಾಚಿಕೊಳ್ಳುತ್ತದೆ. ಮತ್ತು ಮುಖ್ಯವಾಗಿ ಹಲವು ದಾರಿಗಳು ಕೂಡಬಹುದಾದ ಕೇಂದ್ರವೂ ಆಗಿ ಸಮೂಹ ಪ್ರಜ್ಞೆಯನ್ನು ಒಂದು ನೆಲೆಯಿಂದ ಹತ್ತಾರು ಕಡೆ ಚಾಚಿಸಬಹುದಾದ ಸಾಧ್ಯತೆಯನ್ನು ಸಹ ಸ್ಪರ್ಶಿಸುತ್ತದೆ. ಹನ್ನೊಂದು ಸಂಖ್ಯಾ ಶೀರ್ಷಿಕೆಗಳಲ್ಲಿ ಹೇಳಲ್ಪಡುವ ಈ ಕಥನ ಕ್ರಮ ಅದರೊಂದಿಗೆ ಭಿನ್ನ ಕತೆಯ ಮಗ್ಗುಲುಗಳನ್ನು ಸಹ ಸೂಚಿಸುವಂತಹುದಾಗಿದೆ.

ಮೊದಲ ಸಾಲುಗಳು ಕಾವ್ಯಾರಂಭದ ಸ್ತುತಿಯ ಸಾಮಾನ್ಯ ಅರ್ಥದಲ್ಲಿ ಆರಂಭಗೊಂಡು ಗಣಪತಿ, ಸರಸ್ವತಿ, ತಾಯಿ-ತಂದೆಯ ನಮನದೊಂದಿಗೆ ಮುಂದುವರಿದು ಕುತೂಹಲದ ರೂಪದಲ್ಲಿ ವಾಸ್ತವ, ನವಿರಾದ ಹಾಸ್ಯ, ವ್ಯಂಗ್ಯ, ವಿಡಂಬನೆ, ಗಂಭೀರತೆ ಎಂಬೆಲ್ಲಾ ಪರಿಭಾವನೆಗೆ ಚಾಚಿಕೊಳ್ಳುತ್ತದೆ.

"ಎಲ್ಲಿ ನೋಡಿದರಲ್ಲಿ ಕಬ್ಬು ಭತ್ತಗಳೆದ್ದ
ಗದ್ದೆಗಳ ತೋಟದ ಸಿರಿನಾಡಿಗೆ,
ಪೋತ್ತಾಯಿರ್ತೇಕೆಂದು ಅತ್ತೆ ಕೇಳುವಳೆಂದು
ಕೆರೆಯ ಬಳಿ ಸಿಂಬಿಯನು ಮರೆತ ಸೊಸೆಗೆ
ಹೂವ ಕಟ್ಟುವ ಹೆಣ್ಣ ಕಂಡು ತುಟಿಯಂಚಿನಲಿ
ಕಿರುನಗೆಯ ತೇಲಿಸುವ ಪ್ರಿಯತಮನಿಗೆ
ತಿರುಪತಿಗೆ ಹೋಗಿ ಬಂದಂಥ ಚೆಲುವೆಯ ತಲೆಗೆ
ಜಡೆ ಬಿಲ್ಲೆಯನು ತಂದ ಭಕ್ತಾದಿಗೆ
ಹತ್ತು ಬೆರಳಿಗೆ ಕೂಡ ವಜ್ರದುಂಗುರವಿಟ್ಟು
ಬಡತನವ ಕುರಿತು ವರ್ಣಿಸುವ ಕವಿಗೆ
ಗುರುಗಳಿಗೆ ಶಿಷ್ಯರಿಗೆ, ಹಿರಿಯರಿಗೆ ಕಿರಿಯರಿಗೆ
ಪಂಪನಿಗೆ ಗಾಂಪನಿಗೆ ನಮಿಸುವೆನು ಎಲ್ಲರಿಗೆ"

ಬದುಕಿನಲ್ಲಿ ಏನೆಲ್ಲವುಂಟು, ಎಲ್ಲಾ ಬಗೆಗಳುಂಟು, ಎಲ್ಲ ಬಗೆಯ ಜನರೂ ಉಂಟು. ಯಾವುದೋ ಒಂದು ಅರ್ಥವನು, ಆಯಾಮವನು, ಮಗ್ಗುಲನ್ನು ಆರೋಪಿಸುವುದು, ತೀರ್ಮಾನಿಸುವುದು ಹೇಗೆ ಸಾಧ್ಯ? ಎಷ್ಟು ಸಾಧ್ಯ? ವೈವಿಧ್ಯತೆಯ ಅರ್ಥಗಳಿರುವುದು ಸಹ ಇಲ್ಲಿಯೇ. ಅದನ್ನು ಕವಿ ಪ್ರಾರ್ಥನೆಯ ನೆಪದಲ್ಲಿ ಸುಮ್ಮನೆ ದಾಖಲಿಸುತ್ತಾ ಸಾಗುವುದೇ ಸಂಕಲನದ ಒಳಾರ್ಥಗಳ ಮತ್ತು ಸಂಗತಿಗಳೇ ವ್ಯಾಖ್ಯಾನಗಳಾಗುವ ಸಾಧ್ಯತೆಯೂ ಹೌದು.

'ಕೈಮರದ ನೆಳಲಲ್ಲಿ' ಕುಳಿತುಕೊಳ್ಳುವ ಗಿಳಿವಿಂಡು ಮತ್ತು ಅದರ ಕೆಳಗೆ ಕುಳಿತು ಅನುಭವಗಳನ್ನು ಹಂಚಿಕೊಳ್ಳುವ ಗೆಳೆಯರು ಎನ್ನುವ ಎರಡು ರೂಪಕಗಳು ಪರಸ್ಪರ ಸಾಂಕೇತಿಕ ನೆಲೆಯ ಸಾದೃಶ್ಯಗಳಾಗುತ್ತವೆ. ಒಟ್ಟಾಗಿ ಕುಳಿತು ಮತ್ತೆ ಚದುರಿಹೋಗುವ ಅರ್ಥ ಇಲ್ಲಿ ವಿಶಾಲ ಗ್ರಹಿಕೆಯ ನೆಲೆಯಲ್ಲಿ ಸಂಘಟನೆಯ ಸ್ವಪ್ನನೆಯನ್ನೆಂತೋ ಒಂಟಿತನದ ಸತ್ಯವನ್ನು ಸಹ ಏಕಕಾಲಕ್ಕೆ ಪ್ರತಿಪಾದಿಸುತ್ತದೆ. ಇಲ್ಲಿ ಬರುವ ರಾಮ, ಭಾಗ್ಯಮ್ಮ, ಗೋಸಾಯಿ, ಅಶ್ವತ್ಥಾಮ, ಹೊನ್ನಪ್ಪ, ರಂಗಸ್ವಾಮಿ, ಹನುಮ, ಜಂಬಣ್ಣ ಮುಂತಾದವರೆಲ್ಲ ನಮ್ಮ ಸಾಮಾನ್ಯ ಬದುಕಿನ ಅನುಭವ ಮೂಸೆಯಲ್ಲಿ ಮಾಗಿದವರು. ಒಂದೊಂದು ಅನುಭವದ ಅರ್ಥದಲ್ಲಿ ಒಂದೊಂದು ಸತ್ಯವನ್ನು ಕಂಡವರು, ಕಾಣಿಸುವವರು. ಅವರ ಊರುಗಳಾದರೋ ಅದೇ ನವಿಲೂರು, ಹೊನ್ನೂರು, ತಾವರೆಗೆರೆ, ಇತ್ಯಾದಿಯಾದ ಪರಿಚಯದ ಸ್ಥಳಗಳೇ ಆಗುತ್ತವೆ. ಎಂದಿನಂತೆ ಕೆ.ಎಸ್.ನ., ಕಾವ್ಯ ಬೆಳೆದಂತೆ ಎಲ್ಲವನ್ನು ತನ್ನದಾಗಿಸಿಕೊಂಡು ಭಾವವೂ, ಫಲಿತವೂ ತಾನೇ ಆಗುವ ನೆಲೆಗೆ ಇಲ್ಲಿಯೂ ವಿಸ್ತರಿಸುತ್ತದೆ.

ರಾಮ ಹೇಳಿಕೊಳ್ಳುವ ಮೊದಲ ಕತೆಯೊಂದಿಗೆ ಕಾವ್ಯದ ಬದುಕಿನ ಯಾತ್ರೆ ಆರಂಭವಾಗುತ್ತದೆ. ನವಿಲೂರ ರಾಮನಿಗೆ ಹೊನ್ನೂರ ಬಸವಯ್ಯ ಮಾಡಿದ ಮೋಸ ಇಲ್ಲಿ ಅವನ ದುಃಖದ ಅವಲೋಕನವಾಗಿಯೂ ಪ್ರಕಟಗೊಂಡಿದೆ. ಹಣದ ವ್ಯವಹಾರದಲ್ಲಿ, ಸಾಲ ನೀಡಿದ ಕಾರಣದಲ್ಲಿ 'ಕೊಟ್ಟುದ್ದೆಲ್ಲ ಬಡ್ಡಿಗಾಯ್ತು' ಎನ್ನುವ ಬಸವಯ್ಯನಿಂದ ಬಾಳು ಮುರಿದು ಹೋದ ಕತೆ ಇಲ್ಲಿ

ಹಾಡಾಗಿದೆ. ಅಂತಹ ಮೋಸ-ಅಸಹಾಯಕತೆಯ ನಡುವೆ 'ಕುಳಿತಲ್ಲೆ ಮನೆ' ಅವನ ಬದುಕಿಗಾಗಿದೆ. ಕೈ ಹಿಡಿದ ಮಡದಿ ಇಲ್ಲ, ಸಾಲಕ್ಕಾಗಿ ಮನೆ, ಹಸು, ಆಸ್ತಿಗಳೆಲ್ಲಾ ಕರಗಿ ಹೋಗಿವೆ. ಇದು ರಾಮನೊಬ್ಬನ ಪರಿಸ್ಥಿತಿಯಲ್ಲ. ಇಂತಹುದೇ ನೂರಾರು ದುರಂತಗಳ ನಡುವೆ ಈ ನೆಲದ ಅದೆಷ್ಟೋ ಸಂಸಾರಗಳು ನಲುಗಿ ಹೋಗಿವೆ.

"ದೀಪಗಳು ಆರಿಹೋಗುವುವು, ಹೊಗೆಯೇಳುವುದು
ಉಳಿದ ಬತ್ತಿಗಳಿಂದ ನೆನಪಿನಂತೆ"

ಕೆ.ಎಸ್.ನ. ಅವರು ಕಟ್ಟುವ ಸಾಮಾನ್ಯಾರ್ಥದ ಈ ಬಗೆಯ ಉಪಮೆಗಳು ಸಾಧಿಸುವ ಅನನ್ಯತೆ ಮಾತ್ರ ಅದ್ಭುತವಾದದ್ದೇ...ಬೆಳಕು ಮತ್ತು ಹೊಗೆಯ ವೈರುಧ್ಯ, ತುಂಬಿದ ಬದುಕು ಹಾಳಾದುದರ ಬಗೆಗೆ ಎಷ್ಟು ಪರಿಣಾಮಕಾರಿಯಾದ ಅರ್ಥವನ್ನು ಸ್ಫುರಿಸುತ್ತಿದೆ. ಇಷ್ಟೆಲ್ಲದರ ನಡುವೆ ಬದುಕಬೇಕಾದ ಅನಿವಾರ್ಯತೆ ಮತ್ತು ಬದುಕಬಯಸುವ ಸಂಕಲ್ಪ ಎರಡೂ ಚೋದ್ಯವನ್ನು ಸೃಷ್ಟಿಸುತ್ತದೆ.

ಭಾಗ್ಯಮ್ಮನ ಕತೆ ಮತ್ತೊಂದು ಬಗೆಯದು. 'ನಮ್ಮ ಕತೆಯನ್ನು ಕೇಳಿ' ಎನ್ನುವ ಅವಳ ಕತೆ ಬಹಳಷ್ಟು ಜನರ ಬದುಕುಗಳೂ ಆಗುವ ಪ್ರಾತಿನಿಧಿಕ ಧ್ವನಿಯಾಗಿದೆ. ಕೆಲಸದ ಬದುಕಿನಿಂದ ಬಿಡಿಸಿಕೊಂಡ ವಿಪರ್ಯಾಸ ಅವಳದು. ಯಾರದೋ ನಂಬಿಕೆ-ಅಪನಂಬಿಕೆಗಳ ನಡುವೆ ಬಲಿಪಶುವಾಗಬೇಕಾದ ತುರ್ತು ವ್ಯಕ್ತಿತ್ವವನ್ನು ಒರೆ ಹಚ್ಚುವಂತಹುದೂ ಹೌದು.

'ವಸ್ತುವೆಲ್ಲೋ ನಾವು ಹುಡುಕುವುದು ಇನ್ನೆಲ್ಲೋ' - ಇದು ನಮ್ಮ ಬದುಕಿನ ವಿಪರ್ಯಾಸದ ಮತ್ತೊಂದು ಪರಿ. ಅಂತಹ ಬದುಕಿಗೆ ಮಗಳು ಸತ್ತು ಅವಳ ಮಗುವನ್ನು ತನ್ನದಾಗಿ ಪೋಷಿಸಬೇಕಾದ ವಿಷಮತೆ, ತನ್ನ ನಂತರ ಈ ಮಗುವಿಗೆ ಯಾರು ದಿಕ್ಕು? ಎನ್ನುವ ಪ್ರಶ್ನೆ ಬದುಕಿನಿಂದ ಬಿಡಿಸಿಕೊಳ್ಳಲಾಗದ ಅಸಹಾಯಕತೆಯನ್ನು, ಅಸ್ತಿತ್ವದ ಹುಡುಕಾಟವನ್ನು ಸಹ ಹೇಳುವಂತಹುದು.

"ಹುಟ್ಟಿದ್ದು ತಪ್ಪೆಂದು ನಾವು ಹೇಳುತ್ತಿಲ್ಲ,
ಹೂವಾಗಿ ಅರಳುವೆವು ನಿಮ್ಮ ಕೊರಳಿನ ತುಂಬ
ಸಿಹಿನೀರು ಕೆರೆಯಲಿದೆ ಕುಡಿದು ಬನ್ನಿ"

-ಎನ್ನುವ ಇದು ಹಂಬಲದ ಹಾದಿ.

ಗೋಸಾಯಿಯ ಆಸೆಯ ಕತೆ ಮತ್ತೊಂದು ಬಗೆಯದು. ಚಿನ್ನ ಮಾಡುವ ವಿದ್ಯೆ ಕಲಿಯ ಬಯಸಿ ಮಹತ್ವಾಕಾಂಕ್ಷಿಯ ಬೆನ್ನು ಹತ್ತಿದವನು ಆತ.

"ಚಿನ್ನ ಮಾಡುವ ತಂತ್ರ ಅವನಿಗೊಲಿದಿರಲಿಲ್ಲ
ಅವನಿಗೊಲಿದ್ದದ್ದೊಂದೆ ತಾಮ್ರ ಭಸ್ಮ"

ಮಿತಿ-ವ್ಯಾಪ್ತಿಗಳ ಬಗೆಗೆ ಅರಿವು-ಎಚ್ಚರಗಳಿಲ್ಲವಾದಾಗ ನಡೆಯುವುದೆಲ್ಲಾ ಹೀಗೆ. ಬದುಕು ಶ್ರಮವನ್ನು, ನೈತಿಕತೆಯ ಸಹಜ ದುಡಿಮೆಯನ್ನಷ್ಟೆ ಬಯಸುವಂತಹುದು. ಯಾವ ಪವಾಡಗಳೂ ಬಹುಕಾಲ ಉಳಿದು ಉಪಯೋಗಕ್ಕೆ ಬರುವಂತಹುದಲ್ಲ. ಗೋಸಾಯಿಯ ಬದುಕಾದರೂ ಹೀಗೆ ಅತಂತ್ರವಾಗಿಬಿಟ್ಟಿದೆ. ಹೆಂಡತಿ ಸತ್ತು ಪರುಷವಾಗಿದೆ. 'ಬೂದಿಯಾಯಿತು ಅವಳ ಕೊರಳ ಚಿನ್ನ'

ಇದಕ್ಕಿಂತ ವ್ಯಂಗ್ಯದ ವ್ಯಾಖ್ಯಾನ ಮತ್ತೊಂದು ಬೇಕಿಲ್ಲ. ಅವರಿವರ ಮನೆಯ ಅನ್ನದಲಿ ಗೋಸಾಯಿ ಬದುಕುವಂತಹ ವಿಪರ್ಯಾಸ ಸೃಷ್ಟಿಯಾಗಿದೆ.

"ಊರ ತಾಯಂದಿರೊಲವಿನಲಿ 'ಚಿನ್ನಾ' ಎಂದು
ಮಕ್ಕಳನು ಕರೆವಾಗ ಅವಗೆ ಹಿಗ್ಗು" :

ಇಲ್ಲಿ ಅವನಿಗೆ ನಿಜವಾದ ಚಿನ್ನದ ಅರಿವಾಗಿದೆ, ಸತ್ಯದ ದರ್ಶನವಾಗಿದೆ. ಬದುಕಿನ ಒಟ್ಟು ಸ್ವರೂಪದ ಮರೀಚಿಕೆಯನ್ನು ಕುರಿತಂತಹ ಜ್ಞಾನವೂ ಇದಾಗಿದೆ. 'ನಮ್ಮ ಬದುಕಿನ ಚೆಲುವು ಬಿಸಿಲು ಕುದುರೆಯ ಹಾಗೆ".

ವಿದ್ಯುದಂಗಡಿಯಲ್ಲಿ ಕೆಲಸ ಮಾಡುವ ಚಂದ್ರನ ಅಳಿಯ ಮದುವೆಯ ದಿನವೇ, ಮದುವೆ ಸಂಭ್ರಮದ ನಡುವೆಯೇ ಸಾವಿಗೆ ಶರಣಾಗುವುದು, ಮಂಗಳ ವಾದ್ಯಗಳು ದುರಂತಗೀತೆ ನುಡಿಸುವಂತಾಗುವುದು, ಕರುಣೆಯಿಲ್ಲದ ಘೋರ ಬದುಕಿನ ಮತ್ತೊಂದು ಮಗ್ಗುಲು. ವಿದ್ಯುತ್ ಅಂಗಡಿಯಲ್ಲಿ ಕೆಲಸ ಮಾಡುವ ಹುಡುಗ ದೀಪಜಾಲವನ್ನು ಸರಿಪಡಿಸುವ ಭರದಲ್ಲಿ ವಿದ್ಯುತ್‌ಗೆ ಬಲಿಯಾಗುವ ವಿಪರ್ಯಾಸಕ್ಕೆ ಯಾವ ವ್ಯಾಖ್ಯಾನ ಸರಿತೂಗಬಲ್ಲದು. ಆ ಹೆಣ್ಣಿನ ಬದುಕಿನ ಭವಿಷ್ಯವಾದರೂ ಎಂತು? ಅದಕ್ಕೆ ವ್ಯವಸ್ಥೆಯಿಂದ ದೊರಕಬಹುದಾದ ಪರ್ಯಾಯವಾದರೂ ಏನು? ಹಾಗೆ ಒಂದು ಗಂಡು ಅವಳನ್ನು ವರಿಸಲು ಮುಂದೆ ಬಂದಾಗ 'ಹುತ್ತವನು ಹತ್ತಿ ಹೂ ಬಿಡಿಸಬಾರದು' ಎಂದು ತರ್ಕ ಕಟ್ಟುವ ಜೋಯಿಸ ಯಾವುದರ ಪ್ರತೀಕವಾಗಬಲ್ಲ? ಅರ್ಥ-ಅನರ್ಥಗಳ ಮೂಲವೆಲ್ಲ ಇಲ್ಲಿಂದಲೇ ಆರಂಭವಾಗುವಂತಹುದು. ಅದು ಪ್ರಗತಿ ಮತ್ತು ಪ್ರತಿಗಾಮಿಯ ನಡುವಿನ ಸಂಘರ್ಷವೂ ಹೌದು. ತನ್ನ ಪಾಡಿಗೆ ಒಳಿತಾಗುವ ಬದುಕನ್ನು ಬಿಡಲಾಗದು ಏಕೆ ಈ ವ್ಯವಸ್ಥೆ? ಎಂಬ ಗಾಢ ಪ್ರಶ್ನೆಯೇ ಇಲ್ಲಿ ಮುಖ್ಯವಾಗುವಂತಹುದು.

ಹೀಗೆ ಗಂಭೀರತೆಯ ನಡುವೆ ಕಾಲಿರದ ವಧು ಸೀತಮ್ಮ, ಬಲಗೈಯಿಲ್ಲದ ವರ ಇಬ್ಬರೂ ಪರಸ್ಪರರನ್ನು ವಂಚಿಸುವಂತೆ ಮದುವೆಯಾಗುವ ಚೋದ್ಯ, ಹಾಸ್ಯವೂ ಇಲ್ಲಿ ಕತೆಯಾಗಿದೆ. 'ಇಲ್ಲಿ ಗೆದ್ದವರ್‍ಯಾರು?' ಎಂಬ ಪ್ರಶ್ನೆಗೆ ಉತ್ತರ ಏನು ಸಾಧ್ಯ? 'ತಕ್ಕ ಹೆಣ್ಣಿಗೆ ತಕ್ಕ ಗಂಡ ಸಿಕ್ಕಿದ್ದಾನೆ' ಎನ್ನುವ ಸಮಾಧಾನ ವಧು-ವರರ ಸಮಾಧಾನವೂ ಆಗಬೇಕಾದುದು ಮತ್ತು ಅಂತಹ ಹೊಂದಾಣಿಕೆಯ ಪರಸ್ಪರತೆಯನ್ನು ಸಹ ಬದುಕು ನಿರೀಕ್ಷಿಸುವಂತಹುದು. ಇಂತಹ ವಿಚಿತ್ರಗಳು ಸಾಕಷ್ಟಿವೆ. ಹಾಗಿದ್ದೂ ಬದುಕಿನ ಅನುಸಂಧಾನದ ಸಮಾಧಾನದಲ್ಲಿಯೂ ಅದು ಸಾಗಿಹೋಗಿರುವುದುಂಟು.

ಅಭಿಮಾನದ ವಿಭಿನ್ನ ನೆಲೆಗಳ ಮತ್ತೊಂದು ಕಥನ ರಂಗಸ್ವಾಮಿಯ ಬದುಕಿನದು. ಅಷ್ಟು ಶ್ರೀಮಂತನಲ್ಲದಿದ್ದರೂ ಆಡಂಬರಕ್ಕೆ ಕಡಿಮೆಯಿಲ್ಲ. ಸಾಲದಲ್ಲಿ ಎಲ್ಲವನು ಕಳೆದುಕೊಂಡು 'ಈಶ್ವರನ ಗುಡಿಯ ಪೂಜಾರಿಯಾಗಿ' ಬದುಕ ನಡೆಸುವ ವಿಪರ್ಯಾಸ, ಆದರೂ ಅನುಕೂಲ ದಾಂಪತ್ಯ, ಸಾರ್ಥಕ ಹೆಂಡತಿ. ಮಕ್ಕಳಿಲ್ಲದ ಚಿಂತೆಯೂ ಕಾಡುವುದಿಲ್ಲ.

"....ಕಾಲ ಕೆಟ್ಟಿತು ಎಂದು ಅವಳು
ಹೇಳಿಯೇ ಇಲ್ಲ. ಅದು ಕೆಡುವುದಿಲ್ಲ, ಕೆಡುವವರು ನಾವು"

ಎಷ್ಟು ಸರಳವಾದ ಆದರೆ ಬಹುಪಾಲು ಜನ ಅರ್ಥೈಸಿಕೊಳ್ಳಲಾಗದ ಸತ್ಯ. ಬಂದಂತೆ ಬದುಕನ್ನು ಸ್ವೀಕರಿಸುವ ಎದೆಗಾರಿಕೆಯಾದರೂ ಅದೆಷ್ಟು ಜನರಿಗಿದ್ದೀತು.?

"....ಬದುಕು ಸುಖ ದುಃಖಗಳ
ಕಲ್ಲ ಸೇತುವೆ ದಾಟಿ ಎಲ್ಲಿಗೋ ಹೋಗುವುದು
ಅರಿಯದೂರಿನ ಕಡೆಗೆ...."

ಹಾಗಿರುವಾಗ ಅದನ್ನು ಕುರಿತ ನಿರೀಕ್ಷೆ, ಆಕಾಂಕ್ಷೆ, ಚಪಲತೆಗಳೇ ಮೊದಲಾದ ಹಾರೈಕೆಗಳಿಗೆ ಅವಕಾಶವಾದರೂ ಎಲ್ಲಿದೆ? ಇದ್ದಕ್ಕಿದ್ದಂತೆ ಯಾವ ಬಗೆಯ ತಿರುವಾದರೂ ಸಹ ಇಲ್ಲಿ ಸಾಧ್ಯ. ಭವಿಷ್ಯತ್ತಿನ ಗೂಢತೆಗೆ ಅರ್ಥಗಳು ದೊರಕುವುದು ಇಲ್ಲಿಯೇ ಸಾಧ್ಯ. ತನ್ನಿಂತಾನೇ ಚಲಿಸುವ ಕಾಲದ ನಡುವೆ ಅಲ್ಲಿಂದಲೇ ಮುಕ್ತಾಯದ ಅರ್ಥವನ್ನು, ಉತ್ತರವನ್ನು ಕಂಡುಕೊಳ್ಳಬೇಕಿದೆ. ಆದ್ದರಿಂದಲೇ ನಾಳೆಗಳ ಕುರಿತ ಯಾವ ತರ್ಕವು ಇಲ್ಲಿ ಸಾಧ್ಯವಲ್ಲ ಸಾಧುವೂ ಅಲ್ಲ. ಆದ್ದರಿಂದಲೇ ತಳೆಯುವ ತೀರ್ಮಾನವು ಖಚಿತವಾಗಿ ಅನುಭವದ ನೆಲೆಯಲ್ಲಿಯೇ ಸ್ಪಷ್ಟವಾಗುತ್ತದೆ.

"ನಾವು ಬದುಕುವ ತನಕ
ನೆನೆಯಬಾರದು ಸಾವ. ಎಲ್ಲವನು ಸಹಿಸುವುದು
ನಮ್ಮ ಜೀವ"

ಇದೇ ನಿಜದ ನೆಲೆ ಮತ್ತು ವಾಸ್ತವದ ಅರ್ಥವೂ ಹೌದು. 'ಈಸಬೇಕು ಇದ್ದು ಜೈಸಬೇಕು' ಎನ್ನುವ ನಂಬಿಕೆಯೂ ಇಂತಹುದೇ ನೆಲೆಗೆ ಸಂಬಂಧಿಸಿದ್ದು.

ಕವಿಯ ಭಾವನೆಗಳಿಗೆ, ಪೂರಕವಾದ ಕಲ್ಪನೆಗಳಿಗೆ ತನ್ನದೇ ಆದ ಬೆಳಕು, ಶಕ್ತಿ ಎಲ್ಲವೂ ಇದೆ. ಕವಿಹೃದಯದಲ್ಲಿ ಎಚ್ಚರಿಸಲ್ಪಡುವ ಭಾವನೆಯೂ ಆ ಕಾರಣಕ್ಕೆ ದೇವಸಂಕಲ್ಪವೆಂದೇ ಪ್ರತಿಮಿಸಲ್ಪಡುವುದು. ಬದುಕೆಂದರೇನು? ಎನ್ನುವ ಪ್ರಶ್ನೆ ಉತ್ತರ ನೀಡಬಹುದಾದಷ್ಟು ಸರಳವಲ್ಲ. ಮೂಳೆ, ಮಾಂಸ, ಅಂಗಾಂಗಗಳು, ಉಸಿರು, ಭಾವಗಳು, ಅಭಿಲಾಷೆಗಳು, ಮಾತುಗಳು, ಹೊಂಗನಸುಗಳು, ಹೀಗೆ ಬಿಡಿ-ಬಿಡಿಯಾಗಿ ಯಾವುದೋ ಬದುಕಾಗುವಂತಿಲ್ಲ. ಇದೆಲ್ಲವೂ ಸೇರಿ ಬದುಕಾಗಿಹುದು ಎನ್ನುವುದು ಇಲ್ಲಿಯ ವಾದ. 'ಅನುಭವಕ್ಕೆ ಮೀರಿದ್ದು ಅಮೃತಪಾನ'. ಇಡೀ ಕಾವ್ಯದ ಚಲನೆಗೇ ವಿಶಿಷ್ಟವಾದ ಅರ್ಥ ಒದಗಿಬರುವುದು ಇಂತಹುದೇ ಕಾರಣಗಳಿಗಾಗಿ ಎನ್ನಬಹುದು. 'ಕೈಮರದ ನೆಳಲಲ್ಲಿ' ಸಂಕಲನದ ತುಂಬೆಲ್ಲಾ ಇಂತಹುವೇ ಚಿಂತನೆಯ ರೇಖೆಗಳು ಭಿನ್ನ ಪಾತ್ರಗಳ ರೂಪದಲ್ಲಿ ಬೆಳೆಯುತ್ತಾ ಹೋಗುತ್ತವೆ. ಇಲ್ಲಿ ಬದುಕಿನ ಪರಿಕಲ್ಪನೆಗಳಂತೆಯೇ ನಂಬಿಕೆಗಳು, ಮೌಢ್ಯತೆಗಳೆಲ್ಲವೂ ಚಿಂತನೀಯ ಕಕ್ಷೆಯಲ್ಲಿಯೇ ತೆರೆದುಕೊಳ್ಳುತ್ತವೆ. ಕೆಲವೊಮ್ಮೆ ದಾಖಲೆಗಳೇ, ಸಂವೇದನೆಗಳೇ, ಮೌನದ ಪರಿಭಾಷೆಗಳೇ ಉತ್ತರವೂ ಆಗಿರುವುದುಂಟು.

'ಬೇಷಾಗಿ ಕೂಡುವುವು ಜಾತಕಗಳು' ಎಂದು ಭವಿಷ್ಯ ಹೇಳುವ ಜ್ಯೋತಿಷಿ ಮಾಡಿಸಿದ ಮದುವೆಯ ನಂತರ ಅಳಿಯ ಬೇಗ ಸತ್ತು ಹೋಗುತ್ತಾನೆ, ಮಗಳು ತೌರು ಸೇರುತ್ತಾಳೆ. ಇಲ್ಲಿರುವ ವ್ಯಂಗ್ಯದ ಮೊನಚನ್ನು ಗಮನಿಸಬೇಕು. ಮುಚ್ಚಿರುವ ಅಥವಾ ಗುಪ್ತವಾಗಿರುವ ಭವಿಷ್ಯವನ್ನು ಕುರಿತು ಮಾತನಾಡುವ ಅರ್ಥವಾದರೂ ಎಷ್ಟರದು?

"ಆಗುವುದು ಆಗುತಿದೆ, ಹೋಗುವುದು ಹೋಗುತಿದೆ
ನಂಬಿಕೆಯ ಮೇಲೆ ನಿಂತಿದೆ ಜಗತ್ತು"

ಒಮ್ಮೊಮ್ಮೆ ಅಲ್ಲಲ್ಲಿ ಬೆಳಕು ಕಾಣುವಂತೆಯೇ ಕತ್ತಲೆಯೂ ಅಷ್ಟೇ ಸಹಜವಾಗಿ ಕಾಣುತ್ತದೆ. ಎರಡನ್ನೂ ಒಪ್ಪಬೇಕು, ಅದರಂತೆಯೇ ನಡೆಯಬೇಕು. ಮರೆಯಲ್ಲಿರುವ ಯಾವುದೋ ಶಕ್ತಿಯನ್ನು ಪರಿಭಾವಿಸಬೇಕು. ಇಲ್ಲಿಯೇ 'ಎಲ್ಲ ಅನುಭವ ಸತ್ಯವೆಂದು ಹೇಳುವುದೆಂತು' ಎನ್ನುವ ಪ್ರಶ್ನೆಯೂ ಅಷ್ಟೇ ಗಂಭೀರವಾಗಿಯೂ ಕಾಡುವುದುಂಟು. ಗ್ರಹಿಸಿದ್ದರ ಪರಿಪೂರ್ಣತೆಯ ಬಗೆಗೂ ಪ್ರಶ್ನೆಗಳು ಮತ್ತವರ ಸಹಜತೆ, ಸಾಚಾತನಗಳೆಲ್ಲವೂ ವ್ಯಕ್ತಿತ್ವದ ಮಗ್ಗುಲಲ್ಲಿ ಕಾಡಲೇಬೇಕು. ತನ್ನವಷ್ಟೇ ಲೋಕ ಎಂಬ ಸತ್ಯವು ಸಾರ್ವತ್ರಿಕವಲ್ಲ, ಸಾರ್ವಕಾಲಿಕವೂ ಅಲ್ಲ. 'ತನ್ನ ಕಣ್ಣಿನ ಬೆಳಕಿನಲ್ಲಿ ನಡೆವುದು ಲೋಕ' ಎನ್ನುವುದು ನಂಬಿಕೆಯ ಉತ್ಕರ್ಷ.

ಮುಂದಿನ ಪ್ರಶ್ನೆ ಹುಟ್ಟಿಗೆ ಸಂಬಂಧಿಸಿದ್ದು. 'ತಾನು ಹುಟ್ಟಿದ್ದೇಕೆ' ಎಂಬುದಿಲ್ಲಿಯವರೆಗೆ ಯಾರಿಗೂ ತಿಳಿದಿಲ್ಲ. ಇದು ವೇದಾಂತದ ಚರ್ಚೆಯಲ್ಲ. ಹೇಗೆ ಎನ್ನುವುದಕ್ಕೆ ಉತ್ತರವಿದೆ. ಏಕೆ ಎನ್ನುವುದಕ್ಕೆ ಉತ್ತರವಿಲ್ಲ. 'ಎಲ್ಲರಿಗೂ ಎಲ್ಲವೂ ತಿಳಿದಿಲ್ಲ' ಎನ್ನುವ ವಿಶೇಷ ಗ್ರಹಿಕೆಯ ಹಿನ್ನೆಲೆಯಲ್ಲಿಯೂ ಸತ್ಯದ ಅನಾವರಣವಾಗುವುದಿದೆ. ಹಾಗಾಗಿ ಈ ಬಗೆಯ ಕಾರಣದ ಪ್ರಶ್ನೆ ಪ್ರಾರಂಭವಾಗುವುದರೊಂದಿಗೆ ಇಂತಹುದೇ ಹತ್ತು-ಹಲವು ಸಂಗತಿಗಳ ಬಗೆಗೂ ಪ್ರಶ್ನೆಗಳು ಏಳುವುದುಂಟು. ವರ್ತಮಾನದ ವಾಸ್ತವವಲ್ಲದೆ ಬೇರೇನೂ ತಕ್ಷಣಕ್ಕೆ ಸರಳವಾಗಿ ಯೋಚಿಸುವಂತಹುದಲ್ಲ. ಅಂತಹ ಸರಳವಾದ ಆದರೆ ಗಂಭೀರ ಲಕ್ಷಣದ ಪ್ರಶ್ನೆಗಳಿಲ್ಲಿ ಚಿಂತನೀಯವಾಗಿವೆ. 'ಹುಟ್ಟಿದ್ದು ನಾವು ಸಾಯುವುದಕ್ಕೆ' ಎನ್ನುವ ಮಾತಾದರೂ ಅದು ಇಡಿಯಾದ ಉತ್ತರವಾಗಬಲ್ಲುದೆ? 'ಹುಟ್ಟಿಗೂ-ಸಾವಿಗೂ ನಡುವೆ ಇರುವುದೆ ಬದುಕು' ಎನ್ನುವ ಅರಿವಿನಲ್ಲಿ ಮತ್ತೆ ಜೀವಿಸುವುದರಷ್ಟೇ ಕಾಯುವಿಕೆಯ ಅರ್ಥವೂ ಬದುಕಿನ ಉತ್ತರವಾಗಬಲ್ಲದು. ಇಲ್ಲಿ ಹೊಂದಾಣಿಕೆಯೂ ಅದೆಷ್ಟೋ ನಿರಾಳತೆಗು ಸಹ ಕಾರಣವಾಗಿರಬಲ್ಲದು.

"ಎಲ್ಲವೂ ತಮಗೆ ತಿಳಿದಿದೆಯೆಂದು ಬದುಕುವರು
ನಿಜವಲ್ಲಿ ಪರಮ ಸುಖಿಗಳು. ಸಂದೇಹ ಬಂತೋ
ಉತ್ತರವೆ ಬಾರದೆಯೆ ಸಾಯುವರು"

ಹಾಗಾಗಿ ತಿಳುವಳಿಕೆಯ ಅಗತ್ಯವಿಲ್ಲದೆಯೂ ಬದುಕಬಹುದಾದ ಸಾಧ್ಯತೆಗಳೇ ಇಲ್ಲಿ ತೆರೆದುಕೊಳ್ಳುತ್ತವೆ. ಅವರವರ ಸಂದರ್ಭಕ್ಕೆ ಅವರವರು ಕಂಡುಕೊಂಡದ್ದು, ಪರಿಭಾವಿಸಿದ್ದು ಉತ್ತರಗಳಾಗಿವೆ. ಅಥವಾ ಅದನ್ನು ತೀರಾ ಅನಿವಾರ್ಯವೆಂದು ಬಹಳಷ್ಟು ಜನ ಭಾವಿಸಿಕೊಂಡಿರಲಿಕ್ಕಿಲ್ಲ. ಜಗತ್ತು-ಜನ ಶತಮಾನಗಳಿಂದಲೂ ಹೀಗೆಯೇ ಸಾಗಿದೆ ಎನ್ನುವುದು ಸಹ ಇಲ್ಲಿ ಉಲ್ಲೇಖಿಸಬಹುದಾದ್ದು. ಇಂತಹ ಅನುಭವವನ್ನು ಹಾಡುವ ಗೆಳೆಯ ಬಹುಪಾಲು ಎಲ್ಲ ಮನಸ್ಸುಗಳ ಪ್ರತಿನಿಧಿಯೂ ಆಗಬಲ್ಲವನಾಗುತ್ತಾನೆ.

ಈ ದೀರ್ಘ ಕವನದ ಕೊನೆಯ ಘಟ್ಟ ಬದುಕಿನಲ್ಲಿನ ಮೌಢ್ಯತೆಯನ್ನು, ಅದನ್ನು ಪೋಷಿಸುವ ಪರಿಸರವನ್ನು ಕುರಿತದ್ದು. 'ಗುಹೆ'ಗೆ ಸಂಬಂಧಿಸಿದ ಜೋಯಿಸರ ಮಾತೊಂದು ಐತಿಹ್ಯವಾಗಿಬಿಟ್ಟಿದೆ. ಅತ್ತ ಯಾರೂ ಸುಳಿಯುವಂತಿಲ್ಲ. ವೈಶಾಖ ಶುದ್ಧ ರಾತ್ರಿಯಲ್ಲಿ ಬೇತಾಳ, ಭೂತ, ಕೊಳ್ಳಿ ದೆವ್ವಗಳು,

ಮೋಹಿನಿ, ಜಡೆಮುನಿಗಳಲ್ಲಿ ನೆರೆಯುವರಂತೆ ಎಂದ ಒಮ್ಮೆ ಮಂತ್ರವಾದಿಯೊಬ್ಬ. ಅದರ ಒಳಗೆ ಹೋದವನು ಹಿಂದಿರುಗಿದ ಯಾವ ಸೂಚನೆಗಳೂ ಇಲ್ಲ. ಆದರೆ ಕಾಲದ ಮುಂದೆ ಎಲ್ಲವೂ ಬದಲಾಗಿದೆ.

"ಊರ ಮಕ್ಕಳು ಈಗ ಅಲ್ಲಿ ಸುಳಿದಾಡುವರು
ಊರಗೌಡರು ಅಲ್ಲಿ ಹೂಗಿಡವ ಬೆಳೆಸಿಹರು"

ಕ್ಷುದ್ರ ಜೀವಿಗಳು ಸುಳ್ಳು ಕತೆ ಹೆಣೆದು, ಸುಲಿಗೆಯ ಮಾರ್ಗ ಹುಡುಕಿದ್ದಾರೆ. ಸತ್ಯದರ್ಶನವಾಗುವ ಹಾದಿಯ ಅನಿವಾರ್ಯತೆಯು ಕಾಲದಿಂದ ಕಾಲಕ್ಕೆ ತೆರೆದುಕೊಳ್ಳುತ್ತದೆ. 'ಬದುಕು ಕತೆಯಾಗುತಿದೆ, ನಂಬಿಕೆಯು ನಲುಗುತಿದೆ'. ಜನ ನಿಜದ ಹಾದಿ ಹಿಡಿಯಲು ಬಯಸುತ್ತಾರೆ. ಎಲ್ಲ ಬಗೆಯ ಜನರೂ ಇಲ್ಲಿದ್ದಾರೆ. ಸುಖ ದುಃಖಗಳಂತೆ ಒಳಿತು, ಕೆಡಕು, ಮೋಸ-ಸಾಚ ಎಲ್ಲವೂ ಇಲ್ಲಿ ದಾಖಲಾಗುತ್ತವೆ. ಏಕೆಂದರೆ ಬದುಕಿನ ಒಡಲು ಅಷ್ಟು ವಿಶಾಲವಾದುದು. ಕವಿ ಬಳಸುವ ಸಹಜ-ಸಾಮಾನ್ಯತೆಯ ಉಪಮೆಗಳೂ ಅಷ್ಟೇ ಸತ್ವಪೂರ್ಣವಾಗಿದೆ.

"ತಲೆ ತುಂಬ ಹೂವು, ಕಣ್ತುಂಬ ಕಂಬನಿ; ಬದುಕು,
ಸತ್ಯ ಯಾವುದು ಸುಳ್ಳು ಯಾವುದು ಎಂಬುದನು
ವಿಂಗಡಿಸುವುದು ಹೇಗೆ? ಬೇಲಿಯುದ್ದಕು ಹೂವು,
ಅದರ ಕೆಳಗೇ ಮುಳ್ಳು: ಹೆಜ್ಜೆಯಿಡಬೇಕು ಜೋಪಾನವಾಗಿ
ಕನಸು ರಾಜಕುಮಾರಿ, ಅನುಭವವೋ ತುಂಬ ಕಹಿ"

ಬದುಕಿನ ಬಗೆಗಿನ ಒಂದು ಖಚಿತ ತೀರ್ಮಾನವಿದು. ಇಲ್ಲಿ ಯಾವುದೊಂದು ಇಲ್ಲ, ಹಾಗೆಯೇ ಎಲ್ಲವೂ ಯಾವುದೋ ಒಂದಾಗಿಲ್ಲ. ಹಾಗೆ ಒಂದು ನೆಲೆಯನ್ನು ರೂಪ-ಸ್ವರೂಪವನ್ನು ಅಥವಾ ಉತ್ತರವನ್ನು ನೆಚ್ಚಿಯು ಬದುಕುವಂತಿಲ್ಲ. ಬದುಕುವುದು ಅನಿವಾರ್ಯವೆಂದಾಗ, ಅಗತ್ಯವೆಂದಾಗ ಬಂದದ್ದನ್ನು ಸ್ವೀಕರಿಸಲೇಬೇಕು, ತಪ್ಪಿಸಿಕೊಳ್ಳುವಂತಿಲ್ಲ.

ಹೀಗೊಂದು ಕಥನ ಕವನದ ಮಾದರಿಯ ಸುದೀರ್ಘ ಯಾನವಿಲ್ಲಿ ಮುಗಿದಿದೆ. ಹತ್ತಾರು ಪಾತ್ರಗಳ ಪರಿಕಲ್ಪನೆಯಲ್ಲಿ ಬದುಕಿನ ಶೋಧಕ್ಕೆ ಹೊರಟ ವಸ್ತುವಿನ ಭಿತ್ತಿಯೂ ಅಷ್ಟೇ ವಿಶಾಲವಾದುದಾಗಿದೆ. 'ಹುಡುಕಾಟ' ಎನ್ನುವುದಕ್ಕೆ ಹೊಸತೊಂದು ಆಯಾಮವೇ ಇಲ್ಲಿ ಲಭ್ಯವಾಗುತ್ತಿದೆ. ಕೆ.ಎಸ್. ನರಸಿಂಹಸ್ವಾಮಿ ಅಪರೂಪದ ತಂತ್ರವೊಂದರ ಮೂಲಕ ಅಪಾರವಾದುದನ್ನು ಮಹತ್ವವಾದುದನ್ನು ಸಾಧಿಸಿದ್ದಾರೆ. ಕಾವ್ಯ ಕುರಿತ ಗಂಭೀರ ಚಿಂತನೆಗಳು, ಬದುಕನ್ನು ಕುರಿತ ಅನ್ವೇಷಣೆಯ ನೆಲೆಗಳು ಎಲ್ಲವೂ ವಿಶಿಷ್ಟವಾಗಿಯೇ ಕಾಣಸಿಗುತ್ತವೆ. ಒಂದಷ್ಟು ಅನುಭವಗಳ ಬಿಡಿ ಬಿಡಿ ಕಥಾನಕಗಳು ಬದುಕಿನ ಸಮಗ್ರತೆಯ ಅರ್ಥವನ್ನೇ ಪ್ರತಿನಿಧಿಸುತ್ತಿವೆ.

"ಕೈಮರದ ಮೇಲೆ ಕುಳಿತಿರುವ ಗಿಳಿಗಳು ಅದರ ಕೆಳಗೆ ಕುಳಿತುಕೊಳ್ಳುವ ಜನರು" ಎರಡರ ನಡುವಿನ ವಿಶಿಷ್ಟತೆಗಳಿಗೂ ಭಿನ್ನವಾದ ಅರ್ಥಗಳಿವೆ ಮತ್ತು ಅದು ಪರಸ್ಪರ ವ್ಯಷ್ಟಿ-ಸಮಷ್ಟಿಯ ಅರ್ಥವನ್ನು ಸಹ ಸಾಧಿಸುತ್ತಿವೆ. ಒಂದು ಮಾಗಿದ ಬದುಕಿನ ಸಮರ್ಥವಾದ ಅಭಿವ್ಯಕ್ತಿಯ ರೂಪದಲ್ಲಿ ಎಲ್ಲ ಅನುಭವಗಳು ಚೆಲ್ಲಿಕೊಳ್ಳುತ್ತವೆ. ಅವುಗಳನ್ನು ಸಾಧಿಸುವಲ್ಲಿಯ ಕವಿಯ ದೃಷ್ಟಿ, ನೈಪುಣ್ಯತೆ,

ಸಂಯೋಜನೆ, ಕಲಾತ್ಮಕತೆಗಳೆಲ್ಲವೂ ಶ್ರೇಷ್ಠ ಮಟ್ಟದಲ್ಲೇ ಉಳಿಯುತ್ತವೆ. ಕೇವಲ ವಯಸ್ಸಾದ ಕಾರಣಕ್ಕೆ ಬಂದ ಫಲಿತಗಳು ಎನ್ನುವಂತಿಲ್ಲ. ಬದುಕಿನ ಹುಡುಕಾಟದ ಗಂಭೀರತೆಗಳಂತೋ ಬದುಕಬೇಕಾದ ಉತ್ಸಾಹವೂ ಅಷ್ಟೇ ಅರ್ಥವಂತಿಕೆಯಿಂದ ತೆರೆದುಕೊಳ್ಳುವುದುಂಟು. ಇದು ಸಮಗ್ರತೆಯ ಬಂಧದಲ್ಲೂ ಒಂದಷ್ಟು ಸಮಾಧಾನ, ಸಾಂತ್ವನ, ಧೈರ್ಯ, ಪ್ರೀತಿಗಳನ್ನೆಲ್ಲಾ ಮೂಡಿಸುವುದುಂಟು. ಬದುಕನ್ನು ಗಂಭೀರಗೊಳಿಸುವ ಕೆಲವು ಪ್ರಶ್ನೆಗಳು ಅಸ್ತಿತ್ವದ ಅರ್ಥದಲ್ಲಿ ಕಾಡಿದರೂ ಅದಕ್ಕೆ ಪೂರಕವಾಗಿ ಕಾಣಿಸುವ ಒಳನೋಟಗಳು, ಪರವಾದ ನಿಲುವುಗಳು, ತಾಳಬೇಕಾದ ನಿರ್ಧಾರವನ್ನು ನಿಯಂತ್ರಿಸುವುದು ಈ ಕಾವ್ಯದ ಯಶಸ್ಸಿನ ಗಟ್ಟಿಯಾದ ಸೂತ್ರವೂ ಆಗಿದೆ.

ಮೊದಲಲ್ಲೆ ಗಮನಿಸಿದಂತ ಕಾವ್ಯ ಸ್ವರೂಪ ವಿಶಿಷ್ಟವಾದ ಒಂದು ಪ್ರಯೋಗವೇ ಸರಿ. ಏಕ ಕಾಲಕ್ಕೆ ಕತೆಯ ರೂಪ, ಕಾವ್ಯದ ಬಂಧ ಎರಡನ್ನು ತಮ್ಮ ಎಂದಿನ ಸಹಜ ಭಾಷೆಯಲ್ಲಿಯೇ ಸಾಧಿಸುವ ಕೆ.ಎಸ್.ನ. ಮಹತ್ವವನ್ನು ದಾಖಲಿಸಿದ್ದಾರೆ ಎನ್ನಬಹುದು. ಮಾತು ಅನುಭವದ ಕಾವಿನ ಪದವಾಗುವ, ಪದ್ಯವಾಗುವ ಕೌತುಕವಿಲ್ಲಿ ಘಟಿಸಿದೆ. ಸಾಮಾನ್ಯತೆಯಿಂದಲೇ ಜಿಗಿಯುವ ಹೋಲಿಕೆಗಳು ಅಸಾಮಾನ್ಯವಾದ ಪರಿಣಾಮವನ್ನು ಸಾಧಿಸುತ್ತವೆ. ಕಾವ್ಯದ ಮತ್ತೊಂದು ಮಗ್ಗಲಿನ ಅನ್ವೇಷಣೆಯ ಹಾದಿಯಲ್ಲಿ 'ಕೈಮರದ ನೆಳಲಲ್ಲಿ' ಸಂಕಲನ ಮೈಲಿಗಲ್ಲಾಗಬಲ್ಲುದಾಗಿದೆ.

ಉಳಿದಂತೆಯೇ ಈ ಸಂಕಲನದಲ್ಲಿ ಇನ್ನಿತರ ಹನ್ನೊಂದು ಬಿಡಿ ಬಿಡಿ ಕವಿತೆಗಳಿವೆ. ಅವು ಹತ್ತು-ಹಲವು ಬಿಡಿ ಬಿಡಿಯಾದ ಸಂಗತಿಗಳನ್ನು, ವಸ್ತುಗಳನ್ನು ನಿರ್ದೇಶಿಸುತ್ತವೆ. ಎಲ್ಲ ಕಡೆ ಮತ್ತದೇ ಜೀವನ ಪ್ರೀತಿ, ಒಲವು ಚೆಲುವು, ಉತ್ಸಾಹ, ನಿರೀಕ್ಷೆ, ಆಶಾವಾದಗಳೇ ಮೊದಲಾದ ಸಂಗತಿಗಳು ಕಾವ್ಯವಾಗುತ್ತವೆ.

"ಕಣ್ತುಂಬ ನಾನಂತು ಲೋಕವನು ಕಂಡಿಹೆನು,
ನನಗೆ ಬೇಡವೆ ಬೇಡ ಅಗ್ಗದ ನುಡಿ" (ಬೇಡವೇ ಬೇಡ)

ಎನ್ನುವ ಖಚಿತ ತೀರ್ಮಾನಗಳು ಇಂತಲ್ಲಿಯೇ ದಾಖಲಾಗುತ್ತವೆ. 'ದೀಪಾವಳಿ' ಅರ್ಥವೂ ಓಗೆಯ ಬೆಳಕಿನ ಸಾಂಕೇತಿಕ ನೆಲೆಯಲ್ಲಿ ವಿಸ್ತಾರಗೊಳ್ಳುತ್ತದೆ. ಒಲವು-ಚೆಲುವುಗಳೆಲ್ಲವೂ ಹೀಗೆಯೇ. ಅವನ್ನು ಹಾರೈಸಿ, ಉಳಿಸಿ-ಬೆಳಸಬೇಕಾದ ಜವಾಬ್ದಾರಿಗಳೂ ನಮ್ಮದೇ ಎನ್ನುವುದು ಕವಿಯ ನಿರಂತರವಾದ ಗ್ರಹಿಕೆ.

"ಈ ಚೆಲುವು ಎಂಬ ಪದಾರ್ಥ ಇಹುದೆಂದರಿಹುದು,
ಇಲ್ಲವೆಂದರೆ ಇಲ್ಲ, ಇದು ಲೋಕ. ಶುಭಮಸ್ತು" (ರಾಮನವಮಿ)

ಹಾಗೆಂದು ಮಾತ್ರವೇ ನಿರಾಳವಾಗುವುದು, ಸಂತಸಪಡುವುದು, ಸುಖವನ್ನು ಹುಡುಕುವುದು ಸಾಧ್ಯವಾಗುತ್ತದೆ. ಸಾಮಾನ್ಯತೆಯ ಜೊತೆ ಜೊತೆಗೆ ಕವಿಮನದ-ಕವಿತ್ವದ ಶಕ್ತಿಯನ್ನು ಕೆ.ಎಸ್.ನ. ಕಾಣುತ್ತಾರೆ, ಕಾಣಿಸುತ್ತಾರೆ.

"ಸಮುದಾಯ ದನಿಗಳಲಿ ನನ್ನ ದನಿಯನು ಬೆರಸಿ
ಇಂಪಾದ ಹಾಡುಗಳ ಕಟ್ಟಬಲ್ಲೆ"

"ನನ್ನ ರಕ್ತದ ತುಂಬ ಹೊಸ ಮಾತು ಪಲ್ಲವಿಸಿ
ಹೊಸ ವಸಂತವನ್ನಲ್ಲಿ ತರಲು ಬಲ್ಲೆ" (ಕವಿ)

ಕೆ.ಎಸ್.ನ. ಅವರ ಕಾವ್ಯದ ಫಲಿತಗಳು ಹೀಗೆ ಸಾಧನೆಯ ಅರ್ಥದಲ್ಲೇ, ಪದಗಳಾಗಿ, ಮಾತುಗಳಾಗಿ ಕಾಣಬಲ್ಲವು ಮತ್ತು ಸರಳವಾಗಿ ಅರ್ಥವನ್ನು ಕಾಣಿಸಬಲ್ಲವು. ಸಹಜೀವನದ ರೂಪದಲ್ಲಿ ಜೊತೆಯಾಗಿ ಉಳಿದು ಕಾಯಬಲ್ಲವು. ಅಂತಹ ಸಹಜತೆಯಿಂದ ಅವರ ಕಾವ್ಯ ದೂರ ಸರಿದಿಲ್ಲ, ಸರಿಯುವುದಿಲ್ಲ ಎನ್ನುವುದೇ ಮುಖ್ಯ. ಅವರು ಸಂಕಲನದ ಕೊನೆಯ ಕವಿತೆಯಾದ 'ಬದುಕಿನ ಹಾಡು'ವಿನಲ್ಲಿ ಇಂತಹ ಹತ್ತು-ಹಲವು ಮಾದರಿಗಳನ್ನು ನೀಡುತ್ತಾರೆ. ಬದುಕು ಚೆಲುವಾಗುವ ಹಾದಿಯನ್ನು ಪರಿಕಲ್ಪಿಸುತ್ತಾರೆ. ಅವೆಲ್ಲವು ಸಾಧಿಸಿದ, ಸಾಧಿಸಬಹುದಾದ, ಸಾಧಿಸಬೇಕಾದ ಸಂಗತಿಗಳೂ ಆಗುತ್ತವೆ. ಬದುಕನ್ನು ನಿಜಕ್ಕೂ ಹಾಡಾಗಿಸುವ ಶಕ್ತಿಯನ್ನು ಪಡೆಯುತ್ತವೆ.

"ಕನಸಿನಲಿ ನೀನು ಕೇಳಿದ ಹಾಡು ನೆನೆದು
ನಿನ್ನ ಬದುಕಿನಲೊಂದು ಹಾಡ ಕಟ್ಟು
ಇನ್ನೊಂದು ಜೀವ ನೋಯದ ಹಾಗೆ ಬದುಕುವುದು
ಎಲ್ಲ ಸಾಮಾನ್ಯರಿಗೂ ಸಾಧ್ಯವಲ್ಲ"

"ಸೂರ್ಯ ಚಂದ್ರರ ಕಡೆಗೆ ಬುದ್ಧಿ ಹಾರಾಡುತಿದೆ,
ಏಣಿಯನು ನಿಲಿಸು ಆಗಸದ ಕಡೆಗೆ,
ಕಡಲಲ್ಲಿ ಮೀನುಂಟು, ಒಡಲಲ್ಲಿ ಹಸಿವುಂಟು
ಬಿಸಿಲುಗುದುರೆಯ ಮೇಲೆ ಬರಲಿ ಕವಿತೆ"

ಕೆ.ಎಸ್. ನರಸಿಂಹಸ್ವಾಮಿಯಂತಹ ಮಾನವ ಕಾಳಜಿಯ, ಮನುಷ್ಯ ಪ್ರೀತಿಯ ಕವಿ, ನಿರಂತರವಾಗಿ ಒಂದು ಸಾಹಿತ್ಯ ಪರಂಪರೆಯಲ್ಲಿ ಉಳಿಯುವುದು, ಸಹೃದಯನನ್ನು ಕಾಡುವುದು ಎಲ್ಲವೂ ಅಗತ್ಯವೆಂದೇ ಇಲ್ಲಿ ಭಾವಿಸಬಹುದು. 'ಮನುಷ್ಯ ಸಂಬಂಧಗಳ ಸಾರ್ಥಕತೆಯ ನಿರೀಕ್ಷೆಯ ಕಾಲ ಮತ್ತು ಸ್ಥಳ'ಗಳಲ್ಲೆಲ್ಲಾ ಕೆ.ಎಸ್.ನ. ಅವರು ಮತ್ತೆ ಮತ್ತೆ ಪ್ರಸ್ತುತರಾಗುತ್ತಾರೆ.

□

---

ಡಾ. ಜಿ. ಪ್ರಶಾಂತನಾಯಕ, ಹಿರಿಯ ಶ್ರೇಣಿ ಉಪನ್ಯಾಸಕರು, ಕನ್ನಡ ಭಾರತಿ
ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ-೫೭೭ ೪೫೧

# ರವಿಚಂದರ್ : ಎರಡು ಪದ್ಯಗಳು

## ಉರಿವ ಬೆಂಕಿ ಹಕ್ಕಿ

ನಿನ್ನ ಸಖ್ಯದಲ್ಲಿ
ಅನಾದಿ ಮೂಲದ ಕಟು ವಾಸನೆ ಕಂಡು
ಬೆಚ್ಚಿದೆ!
ನಿನ್ನ ಜೊತೆ ಮಾತಿಗಿಳಿದಿದ್ದರೂ
ನಿನ್ನಿಂದ ತಪ್ಪಿಸಿಕೊಳ್ಳುವ ಬಗ್ಗೆ
ಆಲೋಚಿಸುತ್ತಿದ್ದೆ
ಹಾಸಿಗೆಯಲ್ಲಿದ್ದರೂ
ಬೇರೊಂದು ತಾವಿಗೆ ತಡಕಾಡುತ್ತಿದ್ದೆ
ನೀ ತೆರೆದ ದೀರ್ಘ ಬಾಹುಗಳೊಳಗೆ
ಒಂದು ಹುಳುವಾಗಿ
ಒಂದು ಪುಟ್ಟ ಮಿಂಚು ಹುಳುವಾಗಿ
ಚಲಿಸುತ್ತಿರುವೆ; ನಾ ಎಡವಿದಲ್ಲೆಲ್ಲ
ನಿನ್ನದೇ ತಲೆ ಕಾಲು ಮೈ ಮಾಂಸದ ಮುದ್ದೆ!
ಓ! ರಕ್ಕಸಿ
ನಿನ್ನ ಸಂಗದಲ್ಲಿ

ನನ್ನಂಗದ ಕುರುಹು ಮಾಯವಾಗುತ್ತಿದೆ!
ಈ ಬಯಲ ಆಲಯದೊಳಗೆ, ನಾನು-ನೀನು
ಉರಿಯ ಉಯ್ಯಾಲೆಯ ಕಟ್ಟಿ
ಜೋಕಾಲಿಯಾಡಬಾರದಿತ್ತು ಸಖಿ.
ರೆಕ್ಕೆ ಸುಟ್ಟ ಹಂಸ ನಾನು;
ಉರಿವ ಬೆಂಕಿ ಹಕ್ಕಿ ನೀನು!

## ಅವನು ಮತ್ತು ನಾನು

ಆ ಸೂರ್ಯ
ಬೆಳಕು ಚೆಲ್ಲುವ ಕಲೆ ಕಲಿತಿದ್ದಾನೆ; ಹಾಗೆ
ಮಡುಗಟ್ಟಿದ ಇರುಳ ಹರಿಸುವ ಕಲೆಯನೂ.
ನಾನೀಗ; ಬೆಳಕು ಚೆಲ್ಲುವ
ವಿದ್ಯೆ ಕಲಿತಿದ್ದೇನೆ; ಪುರಾತನ ಗುಹೆಗಳಲ್ಲೀಗ
ತುಂಬಿ ತೊಟ್ಟಿಕ್ಕುವ ಬೆಳಕು!

ದಿನವೂ ಬೆಳಕನ್ನು ಹೆತ್ತೂ ಹೆತ್ತೂ
ಪಂಚೇಂದ್ರಿಯಗಳು ಕುಸಿದು
ಮೂಳೆಗಳು ಬಾತಿವೆ!

ನನ್ನದೇ ಕೊನೆಯ ಗರ್ಭಪಾತವೀಗ
ನನ್ನೊಳಗಿಂದ ಈಜಿ ಈಜಿ
ಅಟಂ ಬಾಂಬ್ ಬೀಜವಾಗಿ ಹೊರಹೊಮ್ಮಿದೆ!

ಕಾಲನ ಕೊನೆಯ ಘಂಟೆಯಾಗಲೇ
ಭಾರಿಸತೊಡಗಿದೆ!

ನಾನು ಯಾರ ಮುಖವನ್ನೂ ನೋಡದೆ
ತಲೆ ತಗ್ಗಿಸಿ
ನನ್ನದೇ ಸಾವಿಗೆ
ನನ್ನದೇ ಗೋರಿಯ
ಅಗೆಯುತ್ತಿದ್ದೇನೆ



---

ಜಿ.ಸಿ. ರವಿಚಂದರ್, C/o ಹೋಟೆಲ್ ಕಿರಣ್, ಹಾಸನ ರಸ್ತೆ, ರೈಲ್ವೇ ಗೇಟ್ ಪಕ್ಕ
ಶಾರದಾನಗರ, ತಿಪಟೂರು, ತುಮಕೂರು ಜಿಲ್ಲೆ

# ಹೆಣ್ಣಾದ ಇಲಿಮರಿ

ಮೂಲ: **ಇರುಳಿಗರ ಜಾನಪದ ಕಥೆ**
ವಕ್ತೃ: **ಗುಡ್ಡಯ್ಯ ಅಣಕಡಬೂರು**
ಸಂಗ್ರಹ: **ಡಾ. ಎಂ. ಭೈರೇಗೌಡ**

ಒಬ್ ರಾಜುನ್ಗೆ ನಾಕ್ ಜನ ಗಂಡ್‌ಮಕ್ಳು. ಮೂವ್ರೊರ್ಗೆ ಮದ್ವೆ ಮಾಡಿ ಮೊಮ್ಮಕ್ಳುನೆಲ್ಲ ಆ ದೊರೆ ಕಂಡ. ಈ ಕಿರಿಯೊನ್ಗೆ ಲಗ್ನವಿಲ್ಲ. ಅತ್ಗೆದಿರು ಯಲ್ಲ ಪ್ರೇಮದಿಂದ ಬಟ್ಟೆ ಇಂಡಿ, ನೀರ್ ತುಂಬಿ ಕಾಸುಯ್ಯು, ಕಣ್ಣುಗ್ ಬೇಕಾದ್ ಅದ್ಗೆ ಮಾಡಿಕ್ಕಿ, ಗಂಗಳ ಕೊಡ್ತೋದೆ ನಿಧಾನ ಆಗ್ಲಿ, ಕೈಗೆ ನೀರ್‌ಬುಡೋದೆ ನಿಧಾನ ಆಗ್ಲಿ, ಇವ್ನ ಅತ್ಗೆದಿರ್ಗೆ ಭಾರಿ ಸಣ್ ಸಣ್ ಮಾತಾಡುಕ್ಕೆ ಸುರು ಮಾಡ್ತ. ಹೊಲುತ್ತಾಕೆ ಏರ್‌ಕಟ್ಕೊಂಡೋಗಿದ್ದಾಗ ಅಲ್ಲಿಗೆ ಊಟ ತಕೋಬರೋದು ತಡ ಆದ್ರೆ ಅವುರ್ಗೆ ಒದಿಕ್ಕೋಗೋದು, ಬಯ್ಯುಕ್ಕೋಗೋದು ಬಾರಿ ಮಾತ್ಗೊಳು.

ಇದೇನಾಯ್ತು ಒಂದಾನೊಂದ್ ದಿನ ಈ ಮೂರ್ ಜನ ಸೊಸೆದಿರು ಬಿಂದ್ಗೆಗೊಳೆತ್ ಕೊಂಡು ಒರಟ್‌ಬುಟ್ರು. ನಾವೆಲ್ಲ ಅಲ್ಲೆ ಕಕ್ಸ ಮಾಡ್ಬುಟ್ಟು, ಕೈಕಾಲ್ ತೊಳ್‌ಕೊಂಡು ಮನೆಗ್ ನೀರೆತ್ಕೊ ಬರುವ ಅಂತ ಅವ್ರು ಮುಂದೋದಾಗ ಇವ್ನ ಹಿಂದೆ ಕಪ್ಲುಗೋದ. ಸರಿ ಹೋಗ್ವಾಗ್ಗೆ ಏನಾಯ್ತು? ಇವ್ನ ಅಲ್ಲಿ ಒಣೆ ಮೆಳೆ ಮೊರೇಲಿ ಕೂತ್ಕೊಂಡು ಎದ್ರುಕ್ಕೊಯ್ತಾ ಅವ್ನೆ. ಇವ್ರು ನೀರೆತ್ಕೊಂಡು ಮನುಗ್ ಬರ್ವಾಗ ಏನ್ಮಾತಾಡ್ತಾ ಅವ್ರೆ ಅಂದ್ರೆ ಅಕ್ಕ ಎಲ್ಲಾ ಸರಿ ನಮ್ ಮೈದ ಎಂಥ ಕೇಡಿ, ನಮ್ಮ ಬಾಯಿಗ್ ಬಂದಂಗ ಈ ತರವಾಗೆಲ್ಲ ಮಾತಾಡ್ತನಲ್ಲ ಇವ್ನ ಕೈಲಾಸುಕ್ಕೋಗಿ ಎಂಥ ದೇವಗನ್ನೆ ದಿಬ್ಬಗನ್ನೆಯಂಥ ಹೆಣ್ ತಂದಾನು? ಎಂಥಾ ಸ್ತ್ರೀ ಕಟ್ಕೊಂಡಾನು? ಅದ್ನ ನೋಡ್‌ಬೇಕು ಅಂತ ಒಬ್ಳಂತಾಳೆ.

'ಅಯ್ಯೋ ಇವ್ನೆಲ್ಲ ಮಾಡ್ಕೊಳ್ಳೋದ್ ನಾ ಕಾಣ್ದೆ ಹೋದೆನೆ ಸುಮ್ನಿರೆ' ಅಂತ ವಿರೋಧವಾಗಿ ಮಾತ್ನಾಡ್ತ ಬತ್ತಿದ್ರು ಮೂರ್‌ಜನಾನು. ಈತ ಅತ್ಗೆದಿರ್ ಆಡೋ ಮಾತ್ನೆಲ್ಲ ಕೇಳ್ಕೊಂಡ. ಮನುಗ್ ಬಂದು ತಾಯಿಗೇಳ್ತಾನೆ 'ಅಮ್ಮಾ ನಾನು ಕೈಲಾಸುಕ್ಕೋಗಿ ಹೆಣ್ ತರಬೇಕು, ನನಗೆ ಮುಂಗೈಗಾತ್ರ

ಮೂರ್ ಬುತ್ತಿ ಕಟ್‌ಕೊಡು, ನಾನು ಹೊರೋ ಅಷ್ಟಣ ಕೊಡು' ಅಂದ. ಹೆತ್ತಂತ ತಾಯಿ ಅವಾಗ 'ಹೋ ಕೈಲಾಸುಕ್ಕೋಗಿ ತರಬೇಕಾದ್ರೆ ದೇವಕನ್ನೆರ್ನ ತಾನೇ ತರಬೇಕು, ಆಗ್ಲಿ ಅವುನ್ ಮನ್ಸೊಪ್ಪುದ್ದೆ ತರಲಿ' ಅಂತೇಳಿ ಬುತ್ತಿ ಕಟ್ಟಿ ಬ್ಯಾಗ್‌ಗೆ ಹಣ ತುಂಬಿ ಹೋಗಪ್ಪ ನಿನ್ ಮನ್ಸೊಪ್ಪೊ ಹೆಣ್ ತಕೊಂಡು ಬಾಪ್ಪ ಅಂತೇಳಿ ಅವ್ರ ತಾಯಿ ಕಳ್ಸುದ್ಲು. ಇವ್ನ ಹೋಗ್ತಾ ಅವ್ನೆ 'ಹಣ ಕೊಡ್ತೀನಿ ಹೆಣ್ ಕೊಡ್ತಿರೇನಮ್ಮೋ...' ಅಂತ ಒಳ್ಳೆ ಪಟ್ಣುದೆಲಿ ಬೀದಿ ತಿಬ್ಬ ಸಾರ್ಕ್ಕೊಂಡೋಯ್ತಿದ್ದಾನೆ. ಅಲ್ಲಿ ಒಂದ್ ಬಕ ಮುದ್ಕಿ 'ಅಪ್ಪಾ ಬಾಯಿಲ್ಲಿ, ಏನ್ ಸಮಾಚಾರ? ಇಂಗ್ ಸಾರ್ಕ್ಕೊಂಡೊಯ್ತಿದ್ದಿಯಲ್ಲ' ಅಂದ್ಲು.

'ಅಮ್ಮಾ ಮುದುಕಿ ನನ್ ಮನುಸ್ಕೆ ಸಮಾಧಾನ ಆಗೋ ಅಂತ ಹೆಣ್ಣನ್ನ ತೋರಿಸ್‌ಬುಟ್ರೆ, ಅವ್ರು ಕೇಳೊ ಅಷ್ಟು ಹಣವನ್ನ ನಾ ಕೊಡ್ತೀನಿ' ಅಂದ. ಆ ಮುದ್ಕಿ 'ಅಪ್ಪಾ ನನ್ ಮೊಮ್ಮಗ್ಳು ಬೆಂಗ್ಳೂರೆಲಿದ್ದಾಳೆ! ನಾಳೆ ಕರುಸ್ತೀನಿ, ನಾಳೆ ಬೆಳಗ್ಗೆ ಒತ್ತೀನೆ ಬರೋಗಪ್ಪ ನಮ್ಮನೆಗೆ' ಅಂದ್ಲು. ಆ ದೊರೆ ಮಗ ಒಂದ್ ನೂರೋ ಐನೂರೋ ಅಡ್ವಾನ್ಸ್ ಅಂತ ಕೊಟ್ಬುಟ್ಟು ದೇಸ್‌ದೆಲಿ ಆ ಊರು ಈ ಊರು ಚಂಚರಣೆ ಮಾಡ್ತಾ ಅವ್ನೆ. ಕಾಲ ಕಳಿತಾ ಇದ್ದಾನೆ ಟೇಂ ಬರೋಗಂಟ. ಅಷ್ಟೊತ್‌ಗೆ ಈ ಮುದ್ಕಿ ಆಚಾರ್ರಟ್ಟಿಗೋಗಿ ಒಂದು ಕಬ್ಣುದ್ ಪೆಟ್ಗೆನ ಮಾಡ್ಸಿ, ಆ ಪೆಟ್ಗೆ ಒಳಿಕ್ಕೆ ಒಂದ್ ಇಲಿ ಇಡ್ದು, ಅದ್ರು ಕತ್ಗೆ ಒಂದ್ ಗೆಜ್ಜೆನ ಕಟ್ಟಿ, ಪೆಟ್ಗೆ ಒಳಿಕ್ ಬುಟ್ಕೊಂಡಿರ್ತಾಳೆ. ಬೆಳಿಗ್ಗೆ ಈ ದೊರೆಮಗ ಅಜ್ಜಿ ಮನೆಗ್ ಬಂದು 'ಅಮ್ಮಾ ಮುದುಕಿ ನನ್ ಮನುಸ್ಗೆ ಸಮಾಧಾನ ಆಗೋ ಅಂತ ಹೆಣ್ಣನ್ನ, ನಿನ್ ಮೊಮ್ಮಗ್ಳುನ ಕರಿಸ್ದ?' ಊಂ, ಊಂ, ಕರಿಸಿದ್ದೀನಿ. ಅಂಗಾರ ಕಣ್ಣೆಲ್ ನೋಡ್‌ಬೇಕಲ್ಲ 'ಅಪ್ಪಾ ಏನೂ ನೋಡ್ವಂಗಿಲ್ಲ, ಹಣ ಕೊಟ್‌ಬುಟ್ಟು ನನ್ ಮೊಮ್ಮಗ್ಳುನ ಪೆಟ್ಗೆ ಒಳಗೆ ಮಲ್ಗಿಸಿದ್ದೀನಿ, ಈ ಪೆಟ್ಗೆನ ಒತ್ಕೊಂಡು, ನಿನ್ನರಮನೆಗೋಗು, ನೀನು ಮನಿಕೊಳ್ಳೊ ರೂಮೆಲಿ ಬಾಗ್ಲುಗೊಳ್ನೆಲ್ಲ ಬಂದ್ ಮಾಡಿ ಅಲ್ಲಿ ಪೆಟ್ಗೆ ಬೀಗ ತಗ್ದು ಪೆಟ್ಟಿಯ ಬಾಕ್ಲುನ ಮೇಲುಕ್ಕೆತ್ತು ಅವಾಗ ಎದ್ ಕುಂತ್ಕೊಂಡು ನನ್ ಮೊಮ್ಮಗ್ಳು ನಿನ್ ಜೊತೇಲಿ ಮಾತಾಡ್ತಾಳೋಗಪ್ಪ' ಅಂತೇಳಿ ಮುದ್ಕಿ ಹೇಳಿದ್ದಾಳೆ.

ಅದೇ ಪ್ರಕಾರ ಅವುಳ್ಗೆ ಒಂದತ್ ಸಾವ್ರಾನೋ ಹದಿನೈದ್ ಸಾವ್ರಾನೋ ಹಣ ಕೊಟ್ಟು ಕಬ್ಣುದ್ ಪೆಟ್ಗೇನೆ ಒತ್ಕೊಂಡು ಹೋದ. ಅವ್ನ ಮನಿಕೊಳೊ ರೂಮ್‌ಗೋಗಿ 'ಎಣ್ಣು ಯಾವ್ ರೂಪಸ್ತೆ, ಯಾವ್ ತರ ಇದ್ದಾತು? ವಯಸ್ಸೆಸ್ಟು ಅಂತ ನೇತ್ರುದೆಲಿ ನೋಡ್‌ಬೇಕು' ಅಂತೇಳಿ ಬಾಗ್ಲು ಬಂದೋಬಸ್ತ್ ಮಾಡಿ, ಗಾಳ್ನುಗ್ಗುದ್ ರೀತಿ ಸಂದು-ಗೊಂದು ಇಲ್ಲದಂಗೆ ಭದ್ರ ಮಾಡಿ ಪೆಟ್ಗೆ ಬೀಗ ತಗ್ದು ಪೆಟ್ಗೆ ಮುಸ್ಕು ತಗ್ದಿದ್ದಾನೆ. ತಣಾರ್ನೆ ನೆಗ್ದು ಗಲ-ಗಲ-ಗಲ್‌ನೋಗಿ ವಾಡೆ ಸಂದಿ ಸೇರ್ಕ್ಕೋತು. ಈ ದೊರೆ ಮಗುನ್ಗೆ ಏನಾಯ್ತಪ್ಪ ಅಂದ್ರೆ 'ಅಯ್ಯೊ ಶಿವನೇ ಏನಪ್ಪ ಈ ತರ ಆಯ್ತು, ಮುದ್ಕಿ ಆ ತರ ಏಳುದ್ಲು, ಇಲ್‌ಬಂದ್ ನೋಡುದ್ರೆ ಇಂಗಾಯ್ತಲ್ಲ, ನಮ್ಮತ್ಕೆದಿರು ಎಷ್ಟಾಡ್ಕೊತಾರೆ' ಅಂತೇಳಿ ಇದೇ ಯೋಚನೆ ಮಾಡ್ಕೊಂಡು ಮಲಗಿದ್ದಾನೆ ದೊರೆಮಗ.

ಅವಾಗ ತಾಯಿ ಕರೆಸಿ 'ಓ ಬಾ ಮಗು ಇಲ್ಲಿ. ಹೆಣ್ಣು ತಂದಿದ್ದಿಯೇನಪ್ಪ'? 'ತಂದಿವ್ನಿ'. 'ಎಲ್ಲಿದ್ದಾಳೆ?' ಎಲ್ಲೊ ಇದ್ದಾಳೆ ನಿನಗ್ಯಾಕೆ ಹೋಗವ್ವ'. ಮಗುನ್ಗೆ ಕೋಪ, ತಿರುವಾಕ್ಕೊಂಡ್ ಮಾತಾಡ್‌ವಂಗಿಲ್ಲ, ಅಂತ ಕಠಿಣವಾದಿ. ಹೆತ್ತ ತಾಯಿ ಅಷ್ಟು ಮಾತ್ ಕೇಳ್ಕೊಂಡು ಬಂದ್ ಬುಟ್ಟಿದ್ದಾಳೆ. ಹೆತ್ತ ತಾಯಿಗೇ ಇಂಗೆ ಉತ್ತರ ಕೊಟ್ಟು ಕಳುಸುದ್ರು, ವಾರಗಿತ್ತಿನ ನೋಡ್‌ಬೇಕು ಅಂತೇಳಿ ಅವುಳ್ನ ಹೊರಗೆ ಕರೆಸಬೇಕು ಅಂತ ಹೇಳ್ತಾ ಇರೋರ್‍ಯಾರು? ಹಿರೆ ಸೊಸೇದಿರು.

'ಅತ್ತಮ್ಮ ಇನ್ಯಾಕ ಹೆಣ್ ತಂದುದ್ದಾಯ್ತು! ಮುಡ್ ಕೊಟ್ಟುದ್ದಾಯ್ತು, ಕೊಂಡ್ಕೊ ಬಂದುದ್ದಾಯ್ತು. ನಮ್ ಮೈದುನ್ಗೆ ಸಂತೋಷದಿಂದ ಮದ್ವೆ ಮಾಡ್‌ಬುಡ್ರಿ, ಯಾವಾಗ ಮದ್ವೆ ಏನ್ ಸಮಾಚಾರ ಕೇಳ್ಕೊಬಂದ್ರಿ' ಅಂದ್ರು. ತಿರ್ಗ ಅವುರ್ ತಾಯಿ ಊಟ ಎತ್ಕೊಂಡೋದ್ಲು. 'ಅಪ್ಪ ಬಾಕ್ಲು ತಗಿ'! 'ಯಾಕಮ್ಮ ಅಗ್ಲಲ್ಲಾ ಬರ್‍ತಿ ನನ್ಗೆ ನಿದ್ರೆ ಭಂಗ ಮಾಡುಕ್ಕೆ'. 'ಇಲ್ಲ ತಗಿಯೋ ಏನೂ ಅನುಮಾನ ಪಡಬ್ಯಾಡ, ತಕೊಳಪ್ಪ ಊಟ ಮಾಡು.' 'ಹೋಗಮ್ಮ ನನ್ಗೆ ಊಟ ಬೇಕಾಗಿಲ್ಲ.' 'ಮತ್ತೆ ಲಗ್ನದ್ ವಿಚಾರ ಏನಪ? ಯಾವಾಗಿಟ್‌ಕೊಳ್ಳುವ ಮದ್ವೆಯಾ? ಸಾಮಾನೆಲ್ಲ ಏನೇನವಣೆಸ್ ಬೇಕು, ಕಾರುದ್‌ಪುಡಿಗೆ, ಮಸಾಲೆಗೆ, ಸಾಮಾನ ಬಟ್ಟೆ ಬರೆ ತರಬೇಕು, ಅಪ್ಪಳ, ಉಪ್ಪಿನಕಾಯಿ ಆಕುಸ್‌ಬೇಕು. ಎಣ್ಣುಗ್ ಚಿನ್ನ ಬೆಳ್ಳಿನೆಲ್ಲ ಮಾಡುಸ್‌ಬೇಕು. ಇವೆಲ್ಲ ಸಾಸ್ತ್ರೋಕ್ತವಾಗಿ ಮಾಡಬೇಕಾದ ಕೆಲಸ ಅಲ್ವೇನೋ?' ಅಂದ್ಲು.

'ಹೋಗವ್ವ ನಾಳಿಕ್ಕೇಳ್ತಿನಿ' ಅಂದ. ಆ ಯಮ್ಮ ಒಂಟೋದ್ಲು. ಈತ ಮಲುಕ್ಕೊಂಡು ಹಗ್ಲು ಬೆಳ್ಗಲ್ಲ ಯೋಚ್ನೆ ಮಾಡ್ತಾ ಅವ್ನೆ. 'ನನ್ನನ್ನ ಹೆತ್ತಂತ ತಾಯಿ ಈತರ ಕೇಳುದ್ಲು, ಈ ನಗ್ನುಕ್ಕೆ ಏನಂತ ಏರ್ಪಾಟು ಮಾಡ್ಲಿ? ಆಸಗ ಯಾರ್ನ ಕರ್ಕೊಂಡೋಗ್ಲಿ? ಏನೇನ್ ಸಾಮಾನ್ ಬೇಕು ಅಂತೇಳ್ಲಿ, ಅವ್ರು ಕಂಕ್ಳುದ್ ಬಳೆ ತೊಡ್ಸುಕ್ಕೆ ಯಾವೆಣ್ ಕಳಿಸ್ಲಿ? ಏನಪ್ಪ ಶಿವನೇ'-ಅಂತ ಇವ್ನು ಯೋಚ್ನೆ ಮಾಡ್ತಾ ಮಲ್ಗವ್ನೆ. ಒಳ್ಳೆ ಅರ್ಧ ರಾತ್ರಿ ಟೇಮು. ವಾಡೆ ಸಂದಿಲಿತ್ತಲ್ಲ ಇಲಿಗೆ ಶಿವಸಂಕಲ್ಪದಿಂದ ಇವ್ನು ಯೋಚ್ನೆ ಮಾಡ್ತಿದ್ದುದ್ದರಿವಾಗೋಯ್ತು. ಆ ಪರಮಾತ್ಮ ಶಿವ್ನು ಅವ್ರನ್ ಸಂಕಲ್ಪದಿಂದ ಇದು ಗಿಲ್-ಗಿಲ್-ಗಿಲ್‌ನ ಬತ್ತು ತಲೆದಸಿಗೆ. ತಲೆಬುತ್ತಿ ಪಕ್ಕುಕ್ಕೆ. ಬಂದ್ ಕೂತ್ಕೊಂಡು ಏನೇಳ್ತುದೆ: "ಯಾಕ್ ಯೋಚ್ನೆ ಮಾಡ್ತೀಕು? ಆಗೋದಾಗ್ಲೇ ಬೇಕು. ನಡ್ಯೋದು ನಡೀಲೇಬೇಕು, ನಾನು ತಿನ್ನುಕ್ಕೆ ಒಟ್ಟೆಗಾದಾರುಕ್ಕೆ ಮೂರಕ್ಕಿ ಇಲ್ಲ, ಮೂರ್ ಕಡ್ಲೆ ನುಚ್ಚಿಲ್ಲ, ಅವ್ನೆಲ್ಲ ತಂದ್ ಮಡ್ಗುಕ್ಕಿಲ್ವೆ? ಒಂದ್ ಬಕ್ರಲೋ, ಒಂದ್ ಚೊಂಬಲೋ ನೀರ್ ತಂದು ಮಡ್ಗುಕ್ಕಿಲ್ವೆ ವಾಡೆತಾವ? ಯೋಚ್ನೆ ಮಾಡ್ಕೊಂಡು ಮನಿಕೊಬುಟ್ರಾಗೋಯ್ತೆ? ಏನು ಯೋಚ್ನೆ ಮಾಡೋದ್ ಬ್ಯಾಡ ಮದ್ವೆಗೆ ಸಾಮಾನ ಅವ್ರನ್ನೆ ಅಂತೇಳಿ"-ಅಂತು.

ಅಂಗಂತಿದ್ದಂಗೆ ಇವ್ನೇನಂದ 'ಹೋಗೋಗ್ಲ ಒಡ್ತಿ ಮಗುಂದೆ, ಇಲಿ ಏನೋ ಏಳ್ತುದೆ ಪುರಾಣವಾ. ಒಡ್ಡಿದೆ ಕೊತ್ತಿಗಾಕ್‌ಬುಡ್ತೀನಿ, ಹೋಗಾಚ್ಗೆ' ಅಂದ. 'ಏಳುದ್ ಮಾತ್ನ ಮನ್ಸೆಲ್ ಮಡಿಕೊವಂಗಿದ್ರೆ ಮಡಿಕೋ. ಇಲ್ವೆ ಇದ್ರೆ ಆಳಾಗೋಗು ನನಗಾಗ್‌ಬೇಕಿರೋದೇನು?' ಅಂತ ಗಲ್ ಗಲ್ ಗಲ್‌ನೊಂಟೋಯ್ತು ವಾಡೆ ಸಂದಿಗೆ. ತಾಯಿ ಮತ್ತೆ ಬಂದ್ಲು. 'ಏನಪ್ಪ ನಿನ್ನೆಡ್ತಿ ಕೇಳ್ತವ್ವ? ಕಣ್ಣಲ್‌ನೋಡ್ಕೋತೀನಿ ಕರಿಸ್ ಮಗ್ನೆ' ಅಂದ್ಲು. ಓನೀ ಹೋಗವ್ವ ಸಾಮಾನೆಲ್ಲ ಅವ್ನನ್ಕೊ ಓಗಿ' ಅಂದ. ಹೋದ್ಲು ಮಾರ್‍ನೆ ದಿನುಕ್ಕೆ ಸಂತೆಗೋಗಿ ಬಟ್ಟೆ, ಬರೆ, ಚಿನ್ನ, ಒಡವೆ ಸಕಲೆಂಟು ಭಾಗ್ಯಾನು ಕೊಟ್ಯಾಂತರ ರೂಪಾಯಿ ಖರ್ಚ್ ಮಾಡಿ ತಕೊಂಡ್ ಬಂದ್ರು. ಸೊಸೆದಿರು ಅತ್ತೆಗೇಳ್ತಾರೆ 'ಅತ್ತೆಮ್ಮ ಕಾರುದ್ ಪುಡಿಗೆ ಕೊತ್ತಂಬರಿ ಉರಿಬೇಕು, ಮೆಣಸಿನ್‌ಕಾಯಿ ಉರಿಬೇಕು, ಮಾಡ್‌ಬೇಕು ಆ ಹೊಸ ಸೊಸೆನ್ ಕರ್ಕೊಬರುಕ್ಕಾಗಲ್ವೆ ಇವೆಲ್ಲ ಮಾಡುಕ್ಕೆ?'

ಅಲ್ಲಿಗೋಗಿ ಮಗುನ್ಗೇಳುದ್ಲು 'ಅಪ್ಪಾ ನಿಮ್ಮತ್ಗೆದಿರು ಏನೇಳ್ತಾ ಇದ್ದಾರೆ, ಲಗ್ನುಕ್ಕೇ ಏರ್ಪಾಟ್ ಮಾಡುದ್ದಾಯ್ತು, ಬೇಕಾದ್ದು ಬ್ಯಾಡ್ದಾದ್ದು ಯಲ್ಲ ಸುದ್ಧ ಮಾಡ್ಕೊಬೇಕು ಅಂತ ಹೇಳ್ತಾ ಇದ್ದಾರೆ ನಿನ್ನೆಡ್ತಿನ ಕಳಿಸ್ಕೊಡಪ್ಪ' ಅಂತ ಹೆತ್ತಂತ ತಾಯಿ ಮಗುನ್ನ ಕೇಳುದ್ಲು. ಇವುನ್ಗೆ ಬಾಳಾ ಯೋಚ್ನೆ ಬತ್ತು. ಓ ನಾಳೆ ಬರೋಗಮ್ಮ' ಅಂತ ಕಳಿಸ್‌ಬುಟ್ಟ. ಬೆಳುಗ್ಗೆ ತಾಯಿ ಜೊತೆಲಿ ಕಳುಸ್‌ಬೇಕು

ತಾನೆ? ಸಾಯಂಕಾಲ ಯೋಚ್ನೆ ಮಾಡ್‌ಕೊಂಡು ಮಲ್ಗಿದ್ದಾನೆ; ವಾಡೆ ಸಂದಿಯಿಂದ ಗಲ್ ಗಲ್ ಗಲ್ಪ ಅಂತ ಬತ್ತು. ತಲ್‌ದಸಿಲ್ ಕೂತ್ಕೊಂಡು 'ಯಾಕೇಚ್ನೆ ಮಾಡ್ತಾ ಇರೋದು, ನಾನವುರ್ ಜೊತೆಲೋಗಿ ಕಾರುದ್‌ಪುಡಿ, ಅಕ್ಕಿ, ರಾಗಿ ಇವೆಲ್ಲ ಮಾಡ್‌ಬೇಕಾದ್ದಿಲ್ಲ. ಭಾಗ ಮಾಡ್ಕೊಂಡು ನನ್ ಭಾಗಾನು ತಂದ್ ಮಡುಗ್‌ಬುಡ್ಲಿ. ಒಂದ್ ಗಂಗ್ಳುದ್ ತುಂಬ ಅನ್ನ ಮಾಡಿ ನನ್ನೂಟ್ಗ ತಂದ್ ಕೊಟ್‌ಬುಡ್ಲಿ. ಆ ಮನೆ ಒಳಗಾಕ್‌ಬುಟ್ಟು, ಚೀಲ್ವೋ ಪುಟ್ಟೀನೋ ಮಡುಗ್‌ಬುಟ್ಟು ಬಾಕ್ಲು ಬಂದೋಬಸ್ತ್ ಮಾಡ್ಕೊಂಡು ನಿಮ್‌ತಾಯಿ, ನೀನು ಎಲ್ಲ ಹೊರಟ್‌ಬುಡಿ, ಇದ್‌ಕ್ಯಾಕೆ ಯೋಚ್ನೆ ಮಾಡ್ತಾ ಇದ್ದೀರಿ?' ಅಂತೇಳ್ಬುಟ್ಟು ದಡಾರ್‌ನೆ ಓಡುದ್ದೆ ವಾಡೆ ಸಂದಿಲಿ ಸೇರ್‌ಬುಡ್ತು.

'ಇದ್ ನೋಡುದ್ರೆ ಇಲಿ ಇಷ್ಟ್ ಭಾಗ ಕೇಳ್ಬುಡ್ತಲ್ಲ! ಇದು ಸಾಂಬಾರ್ ಪುಡಿ ಹ್ಯಾಗ್ ಮಾಡ್ತುದೆ? ಅಸಿಟ್ ಹ್ಯಾಗ್ ಮಾಡುತ್ತೆ? ಅಕ್ಕಿ ಹ್ಯಾಗ್ ಮಾಡಾತು?' ಅಂತ ಯೋಚ್ನೆ ಮಾಡ್ವಾಗೆ ತಾಯಿ ಬಂದ್ಲು. 'ಅಮ್ಮ ನನ್ ಮನೆಗೆನೆ ಒಂದ್ ಗಂಗ್ಳುದ್ ತುಂಬ ಅನ್ನ ಮಾಡಿ ತಂದಿಟ್‌ಬುಡು, ನೀವೆಷ್ಟು ಮಾಡುಸ್ತೀರೋ ಅಕ್ಕಿ, ರಾಗಿ, ಮೆಣಸಿನಕಾಯಿ ಪುಡಿ, ಮಸಾಲೆ ಸಾಮಾನೆಷ್ಟು ಮಾಡ್ತೀರಿ ನಮ್ಮತ್ಗೇರುಗ್ ಕೊಟ್ಟಷ್ಟೆ ಅಳ್ದು ನನ್ ರೂಮ್‌ಗೆ ತಂದಿಟ್ ಬುಡು, ಇಲ್ಲಿ ಮಾಡೊರವರೆ ಹೇಗೋ ಮಾಡ್ಕೊಳ್ತಾರೆ' ಅಂದ. ತಾಯಿ ಮಗುನ್ ಕಂಡ್ರೆ ಬಾಳ ಭಯಿಷ್ಟೆ. ಆಗೋಗಿ ಸೊಸೆದಿರ್ ಗೇಳುದ್ಲು 'ನೋಡ್ರಮ್ಮ ನಿನ್ ಮೈದ ಈ ತರ ಹೇಳಿದ್ದಾರೆ. ರಾಗಿ, ಅಕ್ಕಿ, ಏನೇನ್ ಮಾಡ್ಕೊ ಬೇಕೋ ಅದ್ನೆಲ್ಲ ಭಾಗ ಮಾಡ್‌ಬುಟ್ಟು ಅಲ್ಲಿಗ್ ಕಳಿಸ್ ಬುಟ್ಟು ನಿಮ್ ನಿಮ್ ಭಾಗ ನೀವ್ ಮಾಡ್ಕೊಳ್ರಮ್ಮ' ಅಂದ್ಲು. ಅತ್ತೆ ಮಾತು ಸೊಸೆದಿರು ಮೀರ್ವಂಗಿಲ್ಲ. ಎಲಲಿ ಅಳ್ದು ಈ ಯಜಮಾನಮ್ಮ ತಕೊಂಡೋಗಿ ದನಿಯ ಬ್ಯಾರೆ, ಮೆಣಸಿನಕಾಯಿ ಬ್ಯಾರೆ, ಅಕ್ಕಿ ಬ್ಯಾರೆ, ರಾಗಿ ಬ್ಯಾರೆ ಹಾಕ್‌ಬುಟ್ಳು. ಅನ್ನ ಮಾಡಿ ಒಂದ್‌ದಬ್ರೆ ತುಂಬಿ ತಕೊಂಡೋಗಿ ಮಡುಗ್ ಬುಟ್ಳು. ರಾತ್ರಿ ಅವ್ನು ಬಾಗ್ಲು ಬೀಗ ಅಕ್ಕೊಂಡು ದೇವುಸ್ಥಾನುಕ್ಕೊ, ಸಂಗಡಿಗ್ರತ್ತ ಮಾತಾಡುಕ್ಕೊ ಹೊಂಟೋದ.

ಈ ಇಲಿ ಏನ್ ಮಾಡ್ತು: ಇದ್ರು ಕುಲಸ್ತ್ರನೆಲ್ಲ ಕರಿಸ್‌ಬುಡ್ತು. ಏನೇಳ್ತುದೆ 'ನುಚ್ಚಿರ್ ಕೂಡ್ದು, ಒಂದ್ ರಾಗಿ ಕಾಳು ಕಮ್ಮಿ ಆಗುಕ್ಕೂಡ್ದು, ಒಂದಕ್ಕಿ ಕಮ್ಮಿ ಆಗುಕೂಡ್ದು. ಒಂದ್ ದನಿಯಾ ಕಮ್ಮಿ ಆಗುಕೂಡ್ದು, ಎಷ್ಟೆಷ್ಟದೋ ಅಷ್ಟಷ್ಟೇನೆ ಕಲ್ ಬಾರೆ, ಮಣ್ ಬ್ಯಾರೆ ಮಾಡಿ ಹುಡಿ ಮಾಡ್‌ಬೇಕು. ತಕೊಳ್ಳಿ ಅನ್ನ ಎಷ್ಟೆಷ್ಟು ಬೇಕೋ ಊಟ ಮಾಡ್ಕೊಳ್ಳಿ'-ಅಂತ ತಳ್ತು. ಆ ಗ್ರಾಮದಲ್ಲಿರತಕ್ಕಂತ ಇಲಿ, ಸುಂಡ, ತ್ವಾಡ ಎಲ್ಲಾ ಜಾತಿನೂ ಸೇರಿ ಸಂಪತ್ತಾಗಿ ಅನ್ನವನ್ನ ಊಟ ಮಾಡ್ಕೊಂಡು ತಲಾಗೊಂದೊಂದು ಮೆಣ್ಸು ಬರಲಿಲ್ಲ. ತಲಾಗೊಂದೊಂದು ಮೆಣಸಿನಕಾಯಿ ಬರ್‌ಲಿಲ್ಲ. ಆನಂದ್ ವಾಗುಡಿ ಮಾಡ್‌ಬುಟ್ರೊ. ಮಾಡೋ ಕೆಲಸವನ್ನೆಲ್ಲಾ ಕ್ರಮವಾಗಿ ಮಾಡ್ ಬುಟ್ಟು 'ಆಯ್ತಮ್ಮ ಎಲ್ಲ ಕೆಲಸಾನು ಕ್ರಮವಾಗಿ ಮಾಡಿವಿ, ಇದ್ನ ಎತ್ಕೊಂಡೋಗು ನಾವು ಒರುಡ್ತೀವಿ ನಮ್ಮಾಸ್ತಾನುಕ್ಕೆ' ಅಂತೇಳಿ ಇಲಿ ಕುಲಸ್ತ್ರೆಲ್ಲ ಅವ್ರವ್ರ ಆಸ್ತಾನುಕ್ಕೆ ಹೊಂಟೋದೊ. ವಾಡೆ ಸಂದಿಲಿ ಸುಮ್ನೆ ಕೂತಿತ್ತು. ಈ ಗಂಡು ಹೋಗಿದ್ದೋನು ಏಳುದ್ ಟೇಮ್ಗೆ ಬಂದ. ಹೋಗಿ ಒಳಗಡೆ ನೋಡ್ತಾನೆ. ಅಕ್ಕಿ ಕಣ್ಣೆಲಿ ನೋಡುಕ್ಕಿಲ್ಲ, ಕೊಳೆಯೆಲ್ಲ ಜೇಪಿ ಜೇಪಿ ತಗ್ದು ಸುಂದರ್‌ವದಕ್ಕಿ ನಿಂತದೆ ರಾಶ್ಯ. ಸಂಬಾರ ಕಾರದುಡಿ ಗಮ್‌ಗುಡ್ತುದೆ. 'ಆಹಾ ಇದು ನೋಡುದ್ರೆ ಇಲಿ, ಇಷ್ಟುಮಟ್ಟಿನ್ ಕೆಲಸ ಮಾಡ್‌ಬೇಕಾದ್ರೆ ಇದೇನು ಭಗವಂತನ ಮಹಿಮೆ. ನರಮನುಸ ಇಷ್ಟು ಮಾಡುಕ್ಕಾಗಲ್ದು. ಅವ್ರು ಮಾಡಿದ್ದಾರೆ ಅಕ್ಕಿ ಕ್ಯಾಸ ಹಾಗೇ ಇದೆ. ಸಂಬಾರ್‌ದುಡಿ ಒಸಕೆಲಿ ಕುಟ್ಟಿದ್ದಾರೆ. ಕಣ್ಣರ ವದ್ರಿ ಹಿಡ್ದಿದ್ದಾರೆ, ಅದುಕ್ಕಿಂತ ಇದು ಚೆನ್ನಾಗ್ ಮಾಡದೆ.' ಅಂತೇಳಿ ಈ ದೊರೆ ಮಗುನ್ಗೆ ಬಾಳ ಸಂತೋಸ್‌ವಾಗ್ ಬುಡ್ತು.

ಇದು ಹ್ಯಾಗಾಯ್ತು ಅಂತ ಯೋಚ್ನೆ ಮಾಡ್ತಾ ಮಂಚುದ್ ಮ್ಯಾಲ್ ಮಲ್ಗಿದ್ದಾನೆ. ತಾಯಿ ಬಂದ್ಲು, ಸೊಸೆದಿರ್ ಕಳ್ಸಿದ್ರು 'ಅಮ್ಮ ನೋಡ್ಕೊ ಬರೋಗಿ ಅಲ್ಲಿ ನಿಮ್ ಕಿರಿಸೊಸೆ ಹ್ಯಾಗ್ ಮಾಡಿದ್ದಾಳು ಏನು ಅನ್ನೋದ್ನ ನೋಡ್ಕೊ ಬರೋಗು' ಅಂತ. ಬಂದ್ ನೋಡುದ್ಲು ಮಗ ಏಳ್ತಾನೆ 'ಅಮ್ಮಾ ಎಲ್ಲಾ ರಡಿಯಾಗದೆ. ಎತ್ಕೊಂಡೋಗಿ ಎಲ್ ಮಡಿಕೊಬೇಕೋ ಮಡಿಕೊಳಿ.' ಎಲ್ಲಾನು ಕೈ ಹಾಕಿ ಅಕ್ಕಿ, ಅಸಿಟ್ಟು, ಕಾರುದ್ ಪುಡಿ ಎಲ್ಲಾ ನೋಡ್ತಾಳೆ. ಕನ್ನಡಿ ಇದ್ದಂಗದೆ. ಅಕ್ಕಿಲಿ ಕಲ್ಲು ಮಣ್ಣು ಯಾವುದೂ ಇಲ್ಲ. ಸರಿ ನೋಡ್ ಬುಟ್ಟುದ್ದೆ ಕಣ್ಗೊತ್ಕೊಂಡು ಎಲ್ಲಾ ಒಂದೊಂದಾಗಿ ಸಾಗಿಸುದ್ಲು ಆ ಯಜಮಾನಮ್ಮ. ಆ ಸೊಸೆದಿರ್ ಮಾಡಿರೋದು, ಇದು ಎಲ್ಲ ಓಲಿಕೆ ಮಾಡಲಾಗಿ ಇದು ಮೇಲಾಗಿದೆ. ಅದು ಬೇಕಾಗಿದೆ. 'ಏನ್ರೆ ಅವ್ಳ ಯಾವ್ ರೂಪೋ, ಎಷ್ಟು ವಯಸ್ಸಿದ್ದಾತೋ ಕಣ್ಣು ನೇತ್ರುದಲಿ ನೋಡಿಲ್ಲ. ಆದ್ರೆ ಇಂಥ ವೈಖರಿಯಾಗಿ ಎಲ್ಲ ಇಂಗುದ್ದಿ ಬಾಗಾಕಾರ ಮಾಡಿಕೊಟ್ಟಿದ್ದಾಳೆ. ನೀವು ಮಾಡಿದ್ದು ನೋಡಿದ್ರೆ ಒಂದೊಂದು ಒಂದೊಂದ್ ಬಣ್ಣ ಅವೆ. ಈ ತರನಾಗಿ ಮಾಡಿದ್ದೀರಲ್ಲ' ಅಂತ ಸೊಸೆದೀರ್ ಕೆನ್ನೆ ಮ್ಯಾಲೆ ಎಟ್ಟಿಕ್ ಸುರು ಮಾಡುದ್ಲು.

ಇವುರ್ಗ ಆವಾಗ್ಲೆ ಪಟ್‌ಗೋಳ್ ಬಿಳುಕ್ ಸುರುವಾಯ್ತು. ಸರಿ ಅತ್ತೆ ಅಂದುದ್ನೆಲ್ಲ ಕೇಳ್ಕೊಂಡಿದ್ರು, ಸಾಯಂಕಾಲ್‌ದಲಿ ಹೊರಗಡೆ ಕಡುದ್ರು. ಕಕ್ಕಸ್ಗೆ ಒಂದ ಮಾಡುಕ್ಕೋ ಹೋಗಿ ಮಾತಾಡ್ತಾ ಇದ್ದಾರೆ. 'ನೋಡ್ದೇನಕ್ಕ ನೆನ್ನೆ ಬಂದವಳೆ, ಇನ್ನ ಸರಿಯಾಗಿ ಬಂದು ಬೀದಿಗೆ ಜನ್ರುಗೆ ಮೊಕ ತೋರ್ಲಿಲ್ಲ, ಯಾವ್ ರೂಪಲಿದ್ದಾಳೊ, ಅವ್ಳ್ಯಾವ್ ಬಣ್ದಲಿದ್ದಾಳೊ ಹಾಂ. ಅವ್ಳ ಇಷ್ಟುಮಟ್ಟುಕ್ ಮಾಡವ್ಳಲ್ಲ. ನಾವ್ ಮಾಡುದ್ನೆಲ್ಲ ಅತ್ತೆಮ್ಮ ಕಳುವ್‌ಬುಟ್ಳು. ಅವ್ಳ ಕಿರಿ ಸೊಸೆ ಮಾಡುದ್ದುನ್ನ ಮೆಚ್ಕೊಂಡು ಕೆನ್ನೆ ಮ್ಯಾಲ್ ತಿವ್ದು ಮಸ್ಲ ಕೆಡಿಸ್ ಬುಟ್ಕಲ್ಲ ಅತ್ತೆಮ್ಮ' ಅಂತ ಮಾತಾಡ್ತಾ ಅವ್ರೆ.

ಇಂಗೆ ಅತ್ತಾರು ದಿನ ಕಾಲ ನಡೀತು. ಇನ್ನು ಮದುವೆಗೆ ಏರ್ಪಾಟು ಮಾಡ್‌ಬೇಕು. ಎಣ್ಣ್ಗೆ ನೀರುಯ್‌ಬೇಕು. ಗುಂಡ್‌ಗ್ ನೀರುಯ್‌ಬೇಕು, ಚಪ್ರ ಆಕ್‌ಬೇಕು. ಈ ಮೂರ್ ಜನ ಸೊಸೇರು ಏನ್ ಮಾಡುದ್ರು 'ಅತ್ತೆಮ್ಮ ಮದ್ವೆ ಇನ್ನ ಐದು ದಿನಾನೋ ಏಳ್ ದಿನ್ನೋ ಅದೆ. ಅವುನ್ನ ಕರ್ದಿ ಮುತ್ತೈದೇರ್ ಕೈಲಿ ನೀರ್ ತುಂಬ್ಸಿ, ಅರಿಸಿಣ ಹಟ್ಟಿ ಮಾಡೋ ಸಾಸ್ತ್ರವೆಲ್ಲ ಮಾಡುವ, ನಿಮ್ಮಗಾರ್ನ ಕೇಳ್ಕೊ ಬನ್ನಿ' ಅಂತೇಳುದ್ರು. ಅವಾಗ ಮಗ್ನರಮನೆಗೋಗಿ ತಾಯಿ ಬಾಕ್ಲು ಬಡುದ್ಲು. ಓಏನಪ್ಪ ಸಾಮಾನೆಲ್ಲ ಅವುಣ್ಣಾಗದೆ, ಲಗ್ನ ಕಟ್ಟಾಯ್ತು. ಸುಭ ಮುಹೂರ್ತ ಸಿಟ್ಟಯಿಸುದ್ದಾಯ್ತು. ಈವಾಗ ಇನ್ನೈದ್ ದಿನ್ದಲಿ ಮದುವ ಲಗ್ನ ನಡಿತುದೆ. ಅರಿಸಿಣ ಹಟ್ಟಿ ಗಂಡ್ಗೆ-ಎಗ್ಗೆ ನೀರುಯ್‌ಬೇಕು, ಕೇಳ್ಕೊ ಬಾ ಅಂತ ನಿಮ್ಮತ್ಗದಿರು ಏಳಿದ್ದಾರೆ' ಅಂದ್ಲು.

'ನಾಳೆ ಬೆಳುಗ್ಗೆ ಬರೋಗಮ್ಮ ಯಾವ್ದ ಏಳ್ತಿನಿ' ಅಂದ. ತಾಯಿ ಹೊಟ್ಟೋರ್ದ್ಲು. ಬೆಳುಗ್ಗೆ ಎದ್ದು ಮಗುನ್ ಮನೆಗೋದ್ಲು. ರಾತ್ರಿ ಯೆತೆ ಮಾಡ್ತಾ ಮಲ್ಗಿದ್ದಾನೆ. ಮದ್ವೆ ಇನ್ನೈದ್ ದಿನ ಅದೆ. ಅರಿಸಿಣ ಹಟ್ಟಿ ನೀರುಯ್‌ಬೇಕು ಅಂತ ಅತ್ಗೆದಿರೇಳವರೆ. ನಾನೇನೋ ಒಯ್ತಿನಿ. ಶಾಸ್ತ್ರದಂತೆ ಮುತ್ತೈದರು ನೀರ್ ತುಂಬಿ ಅರಿಸಿಣ ಸೀಗೆಕಾಯಿ ಮೈಗಚ್‌ತಾರೆ. ಸ್ನಾನ ಮಾಡಿಸ್ತಾರೆ. ಇಲಿ ಯಾವ್ ತರ್ದಲಿ ಹಸೆ ಮ್ಯಾಲ್ ಕೂತ್ಕೊಂಡು ಅರಿಸಿಣ ಸೀಗೆಕಾಯಿ ಒತ್ತಿಸ್ಕೊಂಡು ಮುತ್ತೈದೇರ್ ಕೈಲಿ ಯಾವ್ ರೀತಿ ನೀರುಯುಸ್‌ಕೊಂಡಾತು? ಯಂಗೆ ಇದೀಗ ಅಂತ ಯೋಚ್ನೆ ಮಾಡ್ತಾ ಅವ್ನೆ.

ಇದು ಗಿಲಿ ಗಿಲಿನ್ ಬತ್ತು. 'ಯಾಕೋ ಕಾಣೆ ಯೋಚ್ನೆ ಮಾಡೋದು?' 'ಅಯ್ಯೊ ಬಡ್ಡೀದೆ! ನೀನೋಡುದ್ರೆ ಇಲಿ. ಫುಸ್ಕ ಫುಸ್ಕ ಅಂತ ನಡೀತಿ, ನಿಮ್ಮ ಪಾಳ್ಳೆಗಾತಿ ಎಕ್ಕತ್ಗೆ ಒಂದ್ ಗೆಜ್ಜಿ

ಕಟ್ಟವಳೆ, ಕುಣ್ಕ ಕುಣ್ಕ ಅಂತ ಗೆಜ್ಜೆ ಕುಣುಸ್ಕೊಂಡು ಬರ್ತೀಯೇ ನಮ್ ತಾಯಿ ಕೇಳುದ್ನ ನಿನ್ನತ್ರ ಏಳ್ತಿನಿ. ಅದ್ನ ಈತರ ಮಾಡು ಅಂತೆಳ್ತಿ. ವಾಡೆ ಸಂದಿ ಸೇರ್ಕೊತಿ. ಈಗ ಅವ್ರು ಅರಿಸಿಣ ಹಟ್ಟಿ ನಿರುಯ್ವಾಗ ನಿನ್ಗೆ ಯಾವ್ ತರ ಮಾಡ್ತಾರೆ' ಅಂತ ಕೇಳ್ದ. 'ಯೋಚ್ನೆ ಏನೂ ಮಾಡ್ ಬೇಕಾದ್ದಿಲ್ಲ! ನೀನೆ ದಡ್ ದಡ್‌ನೋಗಿ ಒಂದಂಡೆ ತಕೊಂಡು ಇಲ್ಲೆ ಒಲೆ ಒಡ್ಡಿ ನೀರ್ ತುಂಬುಡು. ಒಂದ್ ಭರಣಿ ಡಬ್ಬಿವೊಳಗೆ ಅರಿಸಿಣ-ಕುಂಕುಮ, ಸೀಗೆಕಾಯಿ, ಕಳಸ-ಕನ್ನಡಿ ತಂದ್‌ಬುಡು. ಶಾಸ್ತ್ರ ನಾ ಮಾಡ್ಕೊತಿನಿ ನೀರು ನಾನುಯ್ಕೊತಿನಿ' ಅಂದ್‌ಬುಟ್ಟು ವಾಡೆ ಸಂದಿ ಸೇರ್ಕೊತು. ಮಾರನೆಗೆ ತಾಯಿ ಬಂದು ಬಾಕ್ಲು ತಟ್ಟುದ್ಲು. 'ಅಮ್ಮ ನನುಗ್ ಮಾತ್ರ ಸಾಸ್ತ್ರೋಕ್ತವಾಗಿ ನೀರ್ ತುಂಬಿ ಅರಿಸಿಣ, ಸೀಗೆಕಾಯಿ ಇವೆಲ್ಲ ಅವಣೆಸ್‌ಕೊಂಡು ಮುತ್ತೈದರ್‌ಗೇಳಿ ಸ್ನಾನುಕ್ಕೆ ರೆಡಿಮಾಡ್ರಿ ನಾನು ಬರ್ತಿನಿ. ಎಣ್ಗೆ ಇಲ್ಲೆ ನೀರ್ ತುಂಬ್ತಿನಿ, ಅರಿಸಿಣ, ಸೀಗೆಕಾಯಿ, ಕಳಸ-ಕನ್ನಡಿ ತಂದ್‌ಕೊಟ್ ಬುಡು, ಹಸೆಮಣೆಗೆ ಏನೇನು ಸಾಸ್ತ್ರೋಕ್ತ ಸಾಮಾನು ಬೇಕೋ ಅದ್ನೆಲ್ಲ ತಂದ್ ಕೊಟ್‌ಬುಡು. ಇಷ್ಟವಿದ್ರೆ ತಂದ್‌ಕೊಡು, ಇಲ್ದೆ ಇದ್ರೆ ಹೋಗಮ್ಮ. ನನ್ಗೆ ಬಲೇ ಕ್ವಾಪ ಬಂದ್ ಬುಡ್ತುದೆ ಹಾಗೆ ಹೀಗೆ' ಅಂದುದ್ದೆ ಸ್ವಲ್ಪ ರೋಪಾಕಿ ಮಾತಾಡ್‌ಬುಟ್ಟ.

ಅದ್ರಂತೆನೆ ಬಂದು ಸೊಸೆರ್ಗೇಳಿ ಸುಮ್ನಾದ್ಲು. ಅವ್ರ ಅವುಳ್ ರೂಪ ರೇಖೆ ನೋಡುಕ್ಕಾಗ್ಲಿಲ್‌ವಲ್ಲ ಅನ್ನೋದೆ ಇವುರ್ಗೆ ಯಾವುದ್ರೆಲು. ಕಣ್ಣೆಲ್ ನೋಡುಕ್ಕಾಗಿಲ್ವೆ ಅನ್ಕೊಂಡ್ರು. ಇವ್ನ ಅಲ್ಲೆ ಅಡ್ಡೆ ಹಾಕಿ ಒಲೆ ಊಡಿ ನೀರ್ ತುಂಬುಟ್ಟು ನಾಕೈದು ಬಿಂದ್ಗೆನ ಅರಿಸಿಣ, ಕುಂಕುಮ, ಕನ್ನಡಿ, ಕಳಸ ಮತ್ತೊಂದು ಮಗದೊಂದು ತಕೊಂಡುದ್ದೆ ಮಡುಗ್‌ಬುಟ್ಟು ಅದುಕ್ಕೇನ್ ಬೇಕು? ನೆಪಮಾತ್ರಕ್ಕೆ ಆ ಸಾಮಾನೆಲ್ಲ ತರ್ಸಿ ಮಡಿಕೊಂಡದೆ. ಅಷ್ಟೆ ಸ್ನಾನ ಮಾಡುಕ್ಕೆ ರೆಡಿಯಾಗದೆ ಅಷ್ಟೆ. 'ಒಲೆಗ್ ಬೆಂಕಿ ಹಚ್‌ಬುಟ್ಟು ಒರುಟ್ ಬುಟ್ರಾಗಲ್ದೆ?' ಅಂತು.

ಇವ್ನ ಅಮ್ಮುನ್ಗೆ ಸನ್ನೆ ಮಾಡ್ದ 'ಅಮ್ಮಾ ಈ ಸಮಯ ಬುಟ್ರೆ ನಾನು ಎಣ್ಣ ಪರಿಸೋದ್ನೆ ಮಾಡುಕ್ಕಾಗಲ್ಲು. ನೀನು ಒರಗಡೆ ತಾಳ ಆಕ್ಕೊ. ರೂಮೊಳ್ಗೆ ಎಲ್ಲಾದ್ರು ಅಟ್ಟುದ್‌ಮ್ಯಾಲೋ ಯಂಗಾದ್ರು ಓಗಿ ಇದೇನು ಅಂತ ಪರಿಸೋದ್ನೆ ಮಾಡ್‌ಬೇಕು. ನನಗಿಂತ ಮುದುಕಮ್ಮ ಅಣ ತಕೊಂಡು ಇಂಥ ದೇಶ್ದಲಿ ಇಲಿ ಕತ್ಗೆ ಗೆಜ್ಜೆ ಕಟ್ಟಿ ಅವಮಾನ ಮಾಡಿದ್ದಾಳೆ. ಈ ಇಲಿ ನನ್ ಜೊತೆಲ್ ಮಾತ್ನಾಡ್ತುದೆ. ಇಷ್ಟೆಲ್ಲ ಕೆಲಸ ಮಾಡದೆ. ಇದು ಯಾವ್ ರೂಪ್ದಲಿ ಸ್ನಾನ ಮಾಡಾತು? ಇದರ ರೂಪು ನೆಲೆನ ನಾ ಕಂಡಿಡಿಬೇಕು ಕಾಣಮ್ಮ. ನೀನು ಬೀಗ ಹಾಕ್ಕೊಂಡು ಹೊರಟೋಗು. ನಾನು ಯಂಗಾದ್ರು ಮಾಡಿ ಕಂಡಿಡೀತೀನಿ' ಅಂದ.

ಒಳ್ಳೆ ನೀರ್ ತುಂಬಿದ್ದ. ಎಲ್ಲ ರೆಡಿ ಮಾಡ್‌ಬುಟ್ಟಿದ್ದ. ತಾಯಿ ಕೈಲಿ ಬೀಗ ಆಕಿಸ್ ಬುಟ್ಟು ಇವ್ನೋಗಿ ಅಟ್ಟುದ್ ಮ್ಯಾಲ್ ಕೂತ್ಕೊಬುಟ್ಟ. ಇಲಿಗೆ ಗೊತ್ತಿಲ್ಲ. ಇವ್ನ ಅಟಾಮಿಟಿಕ್ ಮಾಡಿ ಅಟ್ಟುಕ್ಕೆ ಸೇರಿದ್ದಾನೆ. ಇದೇನ್ ಮಾಡ್ತು ಒಳ್ಳೆ ಅರ್ಧ ರಾತ್ರಿ ಸಮಯ್‌ದೆಲಿ ತನ್ನ ಶರೀರದ ರೂಪೆಲ್ಲ ತೆಗ್ದಿ ಒಂದ್ ಕಡೆ ಮಡುಗ್ ಬುಡ್ತು. ಒಳ್ಳೆ ದಿವ್ಯವಾದ ರೂಪುನ್ ಸುಂದುರ್ ವಾದೆಣ್ಣಾಗೋಯ್ತು ಶಿವುನ್ ಸಂಕಲ್ಪದಿಂದ. ಅದುರ ಮುಖದ ಕಾಂತಿ ಉರಿತಾ ಅದೆ ದಗ-ದಗ ಅಂತ ದೀವಿಗೆ ಉರ್‌ದಂಗೆ. ಇದೇನ್ ಮಾಡ್ತಾ ಅದೆ ಮಾನ ಮುಚ್ಕೊಳುಕ್ಕೆ ಒಂದು ತುಂಡು ಬಟ್ಟೆ ಉಟ್ಕೊಂಡು ಸ್ನಾನ ಮಾಡ್ತಾ ಇದೆ, ಅರಿಸಿಣ ಎಲ್ಲ ಒರಿಸ್ಕೊಂಡು. ಈ ಸಮಯದಲಿ ಅದ್ರ ಶರೀರದ ಚರ್ಮ ಬಾದೆಗಳ್ನ ಅಪರಿಸಿ ಕಾಷ್ಟಕ ಮಾಡುದ್ರೆ ಈ ಎಣ್ಣು ನನ್ ಸ್ವಾದೀನ ಆಯ್ತುದೆ. ಅಲ್ದೆ ಇದ್ರೆ ಆಗೋದಿಲ್ಲಂತ ಇದೇ ತಕ್ಕ ಸಮಯ ಅಂತೇಳಿ ಏನ್ ಮಾಡಿದ್ದಾನೆ: ಉಪಾಯವಾಗಿ

ಅದು ಮಡಿಸಿಟ್ಟಿದ್ದ ಜೀವ್ರದ್ ಸೀರೆನ ಅಪರಿಸ್ಕೊಬುಟ್ಟು. ಸರಿ ಆರಿಸ್ಕೊಂಡುದ್ದುನ ತಕೊಂಡು ಹೊರಗಡೆ ಹೋಗಿ ಕಾಷ್ಟಕ ಮಾಡ್‌ಬುಟ್ಟು. ಇದು ಸ್ನಾನ ಮಾಡ್ತು. ಇದ್ರ ಕರ್ತವ್ಯನೆಲ್ಲ ಮುಗಿಸ್ತು. ತಿರ್ಗ ಇದು ಚರ್ಮ ಧರಿಸ್ಕೊಳ್ಳುಕ್ಕೆ ಇದೆಲ್ಲಿ ಬುಟ್ಟಿತ್ತೋ ಅಲ್ಲಿಗ್ ಬಂದು ತಡಕಾಡ್ತದೆ. ರಾತ್ರಿ ಹೊತ್ತು ದೀಪ ಇಲ್ಲ. ಕತ್ಲೆ ಎಲ್ಲ ತಡಕಾಡ್ತಾ ಅದೆ. ಅಷ್ಟ್ರಲ್ಲಿ ಇವ್ನ ಬಾಕ್ಲು ಸಂದಿಲಿ ಆನಂದವಾಗಿ ನಿಂತವನೆ. ತಡಕಾಡ್‌ಕೊಂಡು ಆ ಹುಡ್ಗೀನ್ಗೆ ಕೈ ಅತ್ತು.

'ನೀನು ನನ್ಗೆ ಇಷ್ಟು ಅವಮಾನ ಮಾಡ್‌ಬೇಕು ಅಂತ ಯಾಕಿಷ್ಟು ಬಾದೆ ಪಡಿಸ್ತಿದ್ದೀಯ? ನೀನು ನನ್ಗೆ ಸ್ತ್ರೀ ಆಗ್ಬೇಕು. ನಿನ್ಗೆ ನಾನು ಪುರುಸ ಆಗ್ಬೇಕು. ನಿನ್ನ ದಿವ್ಯ ಸೊರೂಪನ ಮರ್ತು ನಮ್ಮ ತರ ಬಾಳ್ಬೇಕು' ಅಂತೇಳಿ ಸತ್ಯ ಪ್ರಮಾಣ ಮಾಡಿಸ್ಕೊಂಡು ಅವಾಗ ಹುಟ್ಟಿರತಕ್ಕಂತ ಪೀತಾಂಬರವನ್ನೋ, ಪಂಚೇನ್ನೋ ಅದ್ರ ಮಾನ ಮೊರೆ ಮಾಡ್ಕೊಳುಕ್ಕೆ ಕೊಡ್ತಾನೆ. ಅವಾಗ ಅದು ಮಾನ ಮೊರೆ ಮಾಡ್ಕೊಂಡು 'ನನಗೆ ಶಿವನ ಸಂಕಲ್ಪದಿಂದ ರೂಪ ಬಂತು. ಆಗ್ಲಿ ನಿಮ್ಮ ಮಾತು ನೆಲವೇರ್ಲಿ, ಈ ಅರಮನೆಗೆ ನಮ್ಮತ್ತಮ್ಮ ಮಾತ್ರ ಬರಬಹುದು. ಸಾಸ್ತ್ರೋಕ್ತ ಮುಗಿಯೋ ಗಂಟ ನೀವ್ಗಾ ಬರಕೂಡ್ದು ನಡೀರಿ ಆಚೆಗೆ' ಅಂತೇಳಿ ಕಳಿಸ್ತು. ಅವ್ನ ಅತ್ತ ಬಿಕ್ಲಿಲ್ಲ. ಬುದ್ಧಿವಂತ ಊಂ ಇವತ್ತು ಊಟ ಮಾಡೋದ್ನ ನಾಳೆ ಊಟ ಮಾಡುದ್ರಾಯ್ತು. ಶಿವ್ನ ನಾನು ನೆನ್ಸಿದ್ಕೂ ದೀರತ್ವ ಮಾಡಿದ್ದಾನೆ. ನನ್ನ ಮೂರ್‌ಜನ ಅತ್ಗೆದಿರು, ಮೂರ್ ಜನ ಅಣ್ದಿರೆದ್ರಲ್ಲಿ ನಡಿಮಂಗಾಯ್ತು. ಶಿವ್ನ ಒಳ್ಳೆ ಪದವಿ ಕೊಟ್ಟ' ಅಂತೇಳಿ ನೆನುಸ್ಕೊಂಡು ಅವ್ರವ್ವನ್‌ಗೇಳ್ದ: 'ಐದು ದಿನ ರಾತ್ರಿ ಕಳಿಯೋ ಗಂಟ ಸೊಸೆ ಜೊತೆಲಿ ಮಲ್ಗುಕ್ಕೆ ನೀನೋಗು, ನಾನು ಜಗುಲಿ ಮ್ಯಾಲೆ ಮಲಿಕೊತಿನಿ' ಅಂತೇಳಿ ವಾಸಸ್ತಾನ ಮಾಡ್ತಾ ಅವ್ನೆ.

ಐದು ದಿಸ ತುಂಬ್ತು. ಮಗುನ್ನ ಕೇಳುದ್ಲು 'ಏನಪ್ಪ ಸೊಸೇನ ನಿನ್ನೆದ್ರಿನ ನಮ್ಮರಮನೆಗೆ ಕರ್ಕೊಂಡೋಗೋದೆ? ಇಲ್ಲ ಸಾಸ್ತ್ರ ಸಂಬಂಧವಂತೆ ಕರ್ಕೊಂಡೋಗೋದೆ?' ಅವ್ನ ಎಣ್ಣುನ್ ಕೇಳ್ದ 'ನಮ್ಮಮ್ಮ ಹೀಗೇಳ್ತಾರೆ ಏನ್ ಮಾಡೋದು?' 'ಸ್ವಾಮಿ ನಮ್ ಕುಲ ಇಲ್ಲ, ನಿಮ್‌ಕುಲ ಅದೆ, ಆ ಸಾಸ್ತ್ರಾಯಲ್ಲ ಆಗ್ಲಿ, ಆನಂತರ ನಮ್ಮತ್ತೆಯುವ್ರ ವಾದ್ಯ ಸಮೇತ ಕನ್ನಡಿ-ಕಳಸ ಸಹಿತ್ವಾಗಿನು ಯಾವ್‌ಟೇಮ್ಗೆ ಬೇಕಾದ್ರೆ ಆ ಟೇಮ್ಗೆ ಬಂದು ನಮ್ನ ಕರ್ಕೊಂಡೋಗ್ಬೋದು ಸ್ವಾಮಿ' ಅಂತೇಳಿ ಅಗ್ನೆ ಕೊಟ್‌ಬುಟ್ಟು. ಅವಾಗ ಇವ್ನಗ್ಗೆ ಕುಂಕುಮ ಕಟ್ಟಿ ಎಗ್ ಕರ್ಕೊಂಡೋಗ್ತಿದ್ರೆ ಪಟ್ನುವೆಲ್ಲ ದಿಗ್ಮ್ರಯವಾಗಿ ಹೊಳಿತಾ ಅದೆ. ಅಂತ ಎಣ್ಣು ಭೂಲೋಕ್ದಲ್ಲೇ ಇಲ್ಲ. ಎಲ್ಲ ನೋಡಿ ಸಂತೋಸ ಪಟ್ರು. ಇಳ್ದೆದೆಲಲಿ ಇಳಿ ತಗ್ಗು ಭೂಮಿಗೆ ಬಿಸಾಕೋದು. ಬೇಕಾದಂತ ರೀತಿಲಿ ಬಾಲಿಕನ ಮದುವೆ ಮನೆಗೆ ಕರ್ಕೊಂಡೋಗ್ತಾ ಇದ್ದಾರೆ. ಆಗ ಅರಮನೇಲಿ ಬೇರೆ ಮನೆಗೆ ಬುಟ್ಟಿದ್ದಾರೆ. ಮುಹೂರ್ತ ಮತ್ತೊಂದು ಮಗದೊಂದು ಯಲ್ಲ ಮಾಡ್ಕೊಂಡು ಸುಖದಿಂದ ರಾಜ್ಯಭಾರ ಮಾಡ್ತಾ ಇದ್ದಾರೆ.

□

ಡಾ. ಎಂ. ಭೈರೇಗೌಡ, ನಂ. ೧೧೯, ೩ನೇ ತಿರುವು, ೮ನೇ ಮುಖ್ಯರಸ್ತೆ
ಆರ್.ಪಿ.ಸಿ. ಬಡಾವಣೆ, ಬೆಂಗಳೂರು-೪೦

# ಲೇಖಕರಿಗೆ ವಿನಂತಿ

ಅಕಾಡೆಮಿಯ ತ್ರೈಮಾಸಿಕ ಪತ್ರಿಕೆ 'ಅನಿಕೇತನ'ದ ಸ್ವರೂಪದಲ್ಲಿ ರಚನಾತ್ಮಕ ಬದಲಾವಣೆಗಳನ್ನು ತರಬೇಕೆಂಬ ಹಂಬಲವನ್ನು ತಾವು ಇದುವರೆಗಿನ ಸಂಚಿಕೆಗಳ ಮೂಲಕ ಗಮನಿಸಬಹುದಾಗಿದೆ. ಕನ್ನಡದ ಶ್ರೇಷ್ಠ ಲೇಖಕರನ್ನೆಲ್ಲ ಒಳಗೊಳ್ಳುವಂತೆಯೂ ಹಾಗೂ ಹೊಸ ಸಂವಾದ, ಸಂವೇದನೆಗಳ ಶಕ್ತ ವೇದಿಕೆಯಾಗಿ ಪತ್ರಿಕೆ ಗಂಭೀರ ಸಾಹಿತ್ಯ ಚಿಂತನೆಗಳ ಅಭಿವ್ಯಕ್ತಿಯಾಗಿ ರೂಪುಗೊಳ್ಳಬೇಕೆಂಬುದೂ ನಮ್ಮ ಆಶಯವಾಗಿದೆ. ಕನ್ನಡದ ಹಿರಿಯ ಹಾಗೂ ಭರವಸೆಯ ಹೊಸ ಪೀಳಿಗೆಯ ಲೇಖಕರೆಲ್ಲರ ಭಾಗವಹಿಸುವಿಕೆಯೇ ಪತ್ರಿಕೆಗೆ ಜೀವದ್ರವ್ಯವಾದ್ದರಿಂದ ತಮ್ಮ ಅಮೂಲ್ಯ ಸಹಕಾರ ಅತ್ಯಗತ್ಯ.

ಅನ್ಯಭಾಷೆಯ ಶ್ರೇಷ್ಠ ಬರಹಗಳ ಅನುವಾದದೊಂದಿಗೆ, ಸ್ವತಂತ್ರ ಬರಹಗಳನ್ನು ಆಹ್ವಾನಿಸುತ್ತಿದ್ದೇವೆ. 'ಅನಿಕೇತನ'ಕ್ಕಾಗಿ ಕವಿತೆ / ಕಥೆ / ಕಿರುನಾಟಕ / ವಿಮರ್ಶಾತ್ಮಕ / ವೈಚಾರಿಕ ಲೇಖನ / ಪ್ರಬಂಧ / ಸಾಂಸ್ಕೃತಿಕ ಚಿಂತನೆ ಹಾಗೂ ಅನುವಾದಗಳನ್ನು ಕಳುಹಿಸಿ ಕೊಡುವುದರ ಮೂಲಕ ನಮ್ಮ ಪ್ರಯತ್ನಕ್ಕೆ ಸಹಕರಿಸಬೇಕೆಂದು ಕೋರುತ್ತಿದ್ದೇವೆ. ದಯವಿಟ್ಟು ಬರೆಯಿರಿ. ಪತ್ರಿಕೆಗೆ ಹೊಸ ರೂಪ ಕೊಡಬೇಕೆಂಬ ಪ್ರಯತ್ನಗಳ ನಮ್ಮೊಂದಿಗೆ ಸದಾ ನೀವಿರುತ್ತೀರೆಂಬುದೇ ನಮ್ಮ ಧೈರ್ಯ ಹಾಗೂ ವಿಶ್ವಾಸ.

ಅನುವಾದಗಳಾದರೆ ಮೂಲ ಲೇಖಕರ ಹೆಸರು, ವಿಳಾಸ, ಮೂಲ ಬರಹದ ಭಾಷೆಯ ವಿವರ ಅಗತ್ಯ. ಅನುಮತಿ ಪತ್ರದ ಜೆರಾಕ್ಸ್ ಪ್ರತಿ ಜೊತೆಯಲ್ಲಿರುವುದು ಅಪೇಕ್ಷಣೀಯ. ಬರವಣಿಗೆ ಹಾಳೆಯ ಒಂದೇ ಮಗ್ಗುಲಲ್ಲಿದ್ದು, ಸ್ಫುಟವಾಗಿ ಓದಲು ಅನುಕೂಲವಾಗುವಂತಿರಲಿ.

ಬರಹಗಳನ್ನು ಕಳುಹಿಸಬೇಕಾದ ವಿಳಾಸ :
**ಸಂಪಾದಕರು, 'ಅನಿಕೇತನ', ಕರ್ನಾಟಕ ಸಾಹಿತ್ಯ ಅಕಾಡೆಮಿ**
**ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು - ೫೬೦ ೦೦೨**

**-ಸಂಪಾದಕರು**

# ಧನ್ಯವಾದಗಳು

ದೇವರೇ,
ನಾವು ನಿನ್ನನ್ನು ಅನುವಾದಿಸುತ್ತಿದ್ದೇವೆ
ಕ್ಷಣಕ್ಷಣವೂ ನೀನು ಅನುವಾದಗೊಳ್ಳುತ್ತೀಯ
ಭೂಮಂಡಲದ ಮೇಲಿರುವ ಅಷ್ಟೂ ಭಾಷೆಗಳಲ್ಲಿ
ಏಕಕಾಲಕ್ಕೆ ಎಲ್ಲೆಡೆಯಲ್ಲಿ
ಎಲ್ಲ ತಾಯಂದಿರ ಅಪ್ರಕಟಿತ ಸಾಹಿತ್ಯದಲ್ಲಿ

ದೇವರೇ,
ನಮಗೆ ಗೊತ್ತಿಲ್ಲ ಇದರ ಲಿಪಿ
ನಮ್ಮ ಅಂಗೈಗಳ ನೇವರಿಕೆಯಲ್ಲಿ
ನಮ್ಮ ತೋಳುಗಳ ಬಿಗಿ ಮಡಿಕೆಯಲ್ಲಿ
ನಮ್ಮ ತೊಡೆಗಳು ರಚಿಸುವ ತೊಟ್ಟಿಲ ತಗ್ಗಿನಲ್ಲಿ
ನಮ್ಮ ಹಾಲುದುಂಬಿದ ಮೊಲೆಗಳಲ್ಲಿ
ಅದಕ್ಕೂ ಮೊದಲು ಮಾಂಸಮಜ್ಜೆಯ ಗರ್ಭಚೀಲದಲ್ಲಿ
ನಾವು ನಿನ್ನನ್ನು ಅನುವಾದಿಸುತ್ತಿರುತ್ತೇವೆ
ಮೂಲಕ್ಕೆ ಸದಾ ಸನಿಹವಾಗಿ
ನಿನ್ನ ಆಶಯಗಳಿಗೆ ಸದಾ ಬದ್ಧರಾಗಿ

ದೇವರೇ,
ನಮ್ಮನ್ನು ಆಶೆಬುರುಕಿಗಳಾಗಿಸದಿರು
ಆಕರಕೆ ಅಪಚಾರವೆಸಗದಂತೆಮ್ಮ ಎಚ್ಚರಿಸುತಿರು
ಈ ಅನುವಾದಕ್ಕೆ ನಾವು ರುಸುಮು ಬೇಡದಂತಿರಲಿ
ಎಲ್ಲ ಹಕ್ಕುಗಳೂ ನಿನ್ನ ಸೌಜನ್ಯದಲ್ಲೇ ಇರಲಿ

ದೇವರೇ,
ಧನ್ಯವಾದಗಳು
ನಮ್ಮನ್ನು ಮಾತ್ರ ನಿನ್ನ ಅನುವಾದಕರಾಗಿ
ಆಯ್ದುಕೊಂಡಿದ್ದಕ್ಕೆ!

– ಲಲಿತ ಸಿದ್ಧಬಸವಯ್ಯ

Reg. No. 45646/88 Price : 20